# ಅಚಲ

ತಿಂಗಳ ಪತ್ರಿಕೆ

ಜೂನ್ - 2003

14.

## ಒಳಗೇನಿದೆ







ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

ಅಚಲ
ಸಂಪುಟ - 18 ಸಂಚಿಕೆ : 6
ಸಂಪಾದಕ ಮಂಡಲಿ
ಎನ್. ಗಾಯತ್ರಿ
ನೇಮಿಚಂದ್ರ, ದೇವಿ,
ಶಾಂತಾನಾಗರಾಜ್
ಹೆಚ್. ಎನ್: ಗೀತಾ
ಹೇಮಲತಾ ಮಹಿಷಿ

ಪ್ರಕಾಶಕರು
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,
ಬೆಂಗಳೂರು

ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು. ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.

Achala - Edited by
Dr. N. Gayathri

Published by
Dr. G. Ramakrishna on behalf of Jagruthi Mahila Adhyayana Kendra

Printed at
Lipi Mudrana
Bangalore - 560 004

ಆತ್ಮೀಯರೆ,

ಕಳೆದ 18 ವರ್ಷಗಳಿಂದಲೂ ತಾವುಗಳು ಪ್ರೀತಿ, ಅಭಿಮಾನದಿಂದ ಅಚಲ ಪತ್ರಿಕೆಯನ್ನು ನಿಮ್ಮದಾಗಿಸಿಕೊಂಡು ಪೋಷಿಸುತ್ತಾ ಬಂದಿರುತ್ತೀರಿ. ಮಹಿಳಾ ಚಳುವಳಿಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ಇನ್ನೂ ಬೆಟ್ಟದಷ್ಟು ಕೆಲಸವಾಗಬೇಕಿದೆ. ಈ ಮಹತ್ತರ ಕಾರ್ಯದಲ್ಲಿ ನಾವೆಲ್ಲರೂ ಒಟ್ಟಾಗಿ ಶ್ರಮಿಸಬೇಕಿದೆ. ನೀವೂ ಅಚಲ ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯನ್ನಾಗಿ ಮಾಡಿಕೊಳ್ಳಿ ಮತ್ತು ಪತ್ರಿಕೆಯ ಪ್ರಸಾರವನ್ನು ಹೆಚ್ಚಿಸುವಲ್ಲಿ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

ಅಚಲದ ಚಂದಾ ವಿವರಗಳು ಹೀಗಿವೆ

ವಾರ್ಷಿಕ ಚಂದಾ - ರೂ. 40/- (ವ್ಯಕ್ತಿಗಳಿಗೆ)
ರೂ. 75/- (ಸಂಸ್ಥೆಗಳಿಗೆ)
ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)
ರೂ. 400/- (ಸಂಸ್ಥೆಗಳಿಗೆ)

ಅಚಲ ವಿಳಾಸ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಸಂಪಾದಕೀಯ

## ಮಹಿಳೆ ಮತ್ತು ರಾಜಕೀಯ

ಇಪ್ಪತ್ತೈದು ವರ್ಷದ ನಿಯತಿ ಬೆಹೆರಾ ಒರಿಸ್ಸಾದ ಬೇಯ್‌ತಾರಿ ಹಳ್ಳಿಯ ಮಹಿಳಾ ಸರಪಂಚ್. ಪರಿಶಿಷ್ಟ ಜಾತಿಗೆ ಸೇರಿದ ನಿಯತಿ ಬೆಹೆರಾ ಒರಿಸ್ಸಾದ ಗಣಪರಿಷದ್ ಪಕ್ಷದಿಂದ ಚುನಾಯಿತಳಾದವಳು. ಇತ್ತೀಚೆಗೆ ಅವಳ ಮೇಲೆ ಆಡಳಿತಾರೂಢ ಬಿಜು ಜನತಾದಳದ ಕಾರ್ಯಕರ್ತರು ಆಕ್ರಮಣ ನಡೆಸಿ ಬೀದಿಯಲ್ಲಿ ಎಳೆದಾಡಿ, ಬೆತ್ತಲೆ ಮಾಡಿ ದೌರ್ಜನ್ಯವೆಸಗಿದ ಘಟನೆ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ರಾಜಕೀಯದಲ್ಲಿ ಕಾರ್ಯನಿರ್ವಹಿಸಬಯಸುವ ಮಹಿಳೆಯರಿಗೆ ಇಂತಹ ಘಟನೆಗಳು ನಿಜಕ್ಕೂ ಆಘಾತವುಂಟುಮಾಡುವಂತಹುದು.

ಹಿಂಸೆಗೆ ಒಳಗಾದ ನಿಯತಿ ಮಾಡಿದ ತಪ್ಪಾದರೂ ಏನು? ಇಂದಿರಾ ಆವಾಸ್ ಯೋಜನೆಯಡಿಯಲ್ಲಿ ಬಿಡುಗಡೆ ಮಾಡುವ ಸಿಮೆಂಟನ್ನು ಅಕ್ರಮವಾಗಿ ಬಿಜು ಜನತಾದಳದ ಕಾರ್ಯಕರ್ತರಿಗೆ ಕೊಡಲೊಪ್ಪದೆ ಹೋದದ್ದು. ಆಡಳಿತಾರೂಢ ಬಿಜು ಜನತಾದಳದ ಕಾರ್ಯಕರ್ತರು ಸಿಮೆಂಟಿಗಾಗಿ ಕೇಳಿದಾಗ ನಿರಾಕರಿಸಿದ ನಿಯತಿ ಬೆಹೆರಾಳ ನಿಲುವಿಗೆ ಉರಿದೆದ್ದರು. ಮೂರನೆಯ ದಿನವೇ ಬಿಜು ಜನತಾದಳದ ಕಾರ್ಯಕರ್ತನಾದ ನಾರಾಯಣ ಬೆಹೆರಾ ಒಂದು ಗುಂಪನ್ನು ಕಟ್ಟಿಕೊಂಡು ಅವಳ ಮನೆಗೆ ನುಗ್ಗಿ ಅವಳ ಗಂಡನೆದುರೇ ಅವಳನ್ನು ಬೀದಿಗೆಳೆದು ತಂದು ಮುಖ ಮೈಗಳಿಗೆಲ್ಲಾ ಚೆನ್ನಾಗಿ ಚಚ್ಚಿ, ಬೆತ್ತಲೆ ಮಾಡಿ ಅವಮಾನಿಸಿದರು. ನಿಯತಿ ತನ್ನ ಗ್ರಾಮಪಂಚಾಯತಿಯ ಕೆಲಸವನ್ನು ದಕ್ಷತೆಯಿಂದ ಮಾಡಿದ್ದಕ್ಕೆ ಪಡೆದ ಉಡುಗೊರೆಯಿದು.

ನಿಯತಿಯು ಸದಸ್ಯಳಾಗಿರುವ ಒರಿಸ್ಸಾ ಗಣಪರಿಷದ್‌ನ ನೇತಾರ ಬಿಜೋಯ್ ಮಹಾಪಾತ್ರರವರು ಹಿಂದೆ ಬಿಜು ಜನತಾದಳಕ್ಕೆ ಸೇರಿದವರಾಗಿದ್ದರು ಮತ್ತು ಮುಖ್ಯ ಮಂತ್ರಿ ನವೀನ್ ಪಾಟ್ನಾಯಕ್‌ರ ಎದುರಾಳಿಯಾಗಿದ್ದರು. ಈ ರಾಜಕೀಯ ದ್ವೇಷವು ಜೊತೆಗೆ ಸೇರಿದ್ದಂತೆ, ಸಿಮೆಂಟ್ ಕೊಡಲು ನಿರಾಕರಿಸಿದ ನಿಯತಿಯ ಮೇಲೆ ದೌರ್ಜನ್ಯವೆಸಗಲು ಬಿಜು ಜನತಾದಳದ ಕಾರ್ಯಕರ್ತರು ಮುಂದಾದರು. ಕೇಂದ್ರಾಪರ ಜಿಲ್ಲೆಯ ಸರ್ಕಾರಿ ಆಸ್ಪತ್ರೆಯಲ್ಲಿ ಚೇತರಿಸಿಕೊಳ್ಳುತ್ತಿರುವ ನಿಯತಿಯ ಮೇಲಿನ ದೌರ್ಜನ್ಯಕ್ಕೆ ಕಾರಣರಾದ ಅಪರಾಧಿಗಳನ್ನು ಬಂಧಿಸಿ ಸೂಕ್ತ ಕ್ರಮ ಕೈಗೊಳ್ಳದಿದ್ದರೆ ರಾಜ್ಯವ್ಯಾಪಿ ಹೋರಾಟ ನಡೆಸುವುದಾಗಿ ಮಹಾಪಾತ್ರರವರು ಎಚ್ಚರಿಸಿದ್ದಾರೆ.

ಇದು ಒರಿಸ್ಸಾದ ಕತೆಯಾದರೆ, ನೆರೆಯ ಮಹಾರಾಷ್ಟ್ರದ್ದು ಮತ್ತೊಂದು ಕತೆ. ಮಹಾರಾಷ್ಟ್ರದ ಪಂಜರವಾಡಿ ಪಂಚಾಯತಿಯ ಮಹಿಳಾ ಸರಪಂಚ್ ದ್ರೌಪದಿ ಚೌಹಾನ್ ಭಗ್ತ್ ಅನಕ್ಷರಸ್ಥ ಮಹಿಳೆ. ಅವಳ ಡೆಪ್ಯುಟಿ ಸರಪಂಚ್ ಬಾಳಾಸಾಹೇಬ್ ಲಕ್ಷ್ಮಣ್ ತೋರಿಸಿದ 'ಹಾಳೆಗೆ' ತನ್ನ ಹೆಬ್ಬೆಟ್ಟು ಒತ್ತಿದಳು. ನೀರಿನ ಕೊಳವೆಯ ಸುಧಾರಣೆಗೆ ಸಂಬಂಧಿಸಿದ ಪತ್ರವದೆಂದು ಭಾವಿಸಿದಳು. ಆದರೆ ಅವಳು ಹೆಬ್ಬೆಟ್ಟು ಒತ್ತಿದ್ದುದು ಅವಳದೇ ರಾಜಿನಾಮೆಯ ಪತ್ರಕ್ಕೆ ಎಂಬುದನ್ನು ಅರಿಯದ ಅಜ್ಞೆಯವಳು.

ನಿಯತಿ, ದ್ರೌಪದಿಯಂತಹ ಹೆಣ್ಣು ಮಕ್ಕಳು ಇಂದಿನ ರಾಜಕೀಯದಲ್ಲಿ ಸಕ್ರಿಯವಾಗಿ ಕಾರ್ಯನಿರ್ವಹಿಸಲು ಸಾಧ್ಯವೇ? ಎಂಬ ಪ್ರಶ್ನೆಯನ್ನು ಹಾಕಿಕೊಂಡಾಗ ಉತ್ತರ ಆಶಾದಾಯಕವಾಗಿಲ್ಲ. ಹೆಣ್ಣು ರಾಜಕೀಯದಲ್ಲಿ ಭಾಗವಹಿಸುವುದರಿಂದ ತನ್ನ ಅಸ್ತಿತ್ವಕ್ಕೆ ಮಾರಕ, ತನ್ನ ಸವಲತ್ತುಗಳನ್ನು ಕಬಳಿಸುವವಳು ಎಂಬ ಪುರುಷ ಪ್ರಧಾನ ಧೋರಣೆಯೇ ವ್ಯಾಪಕವಾಗಿ ನೆಲೆಸಿರುವ ಹಿನ್ನೆಲೆಯಲ್ಲಿ ಮಹಿಳೆಗೆ ರಾಜಕೀಯ ಪ್ರಾತಿನಿಧ್ಯ ಸಿಕ್ಕುವ ಸಾಧ್ಯತೆಯ ಕಷ್ಟದ ಅರಿವಾಗುತ್ತದೆ. ಶಾಸನ ಸಭೆ ಮತ್ತು ಲೋಕಸಭೆಗಳಲ್ಲಿ ಮಹಿಳಾ ಮೀಸಲಾಯಿತಯ ಮಸೂದೆ ಮಂಡಿತವಾಗಲು ವಿರೋಧಿಸುತ್ತಿರುವ ಶಕ್ತಿಗಳ ಮಾನಸಿಕ ನಿಲುವು ಇದೇ ಆಗಿದೆ. ಸರ್ವಪಕ್ಷದ ಸಮ್ಮತಿಯ ನಾಟಕವಾಡುತ್ತಾ ಮಹಿಳಾ ಮೀಸಲಾತಿಯನ್ನು ಕೇವಲ ಚರ್ಚೆಯ ಇಲ್ಲವೇ ಚುನಾವಣಾ ಪ್ರಚಾರದ ಕ್ರಿಯಾತಂತ್ರವಾಗಿ ಉಳಿಸಿಕೊಂಡಿರುವ ರಾಜಕೀಯ ಪಕ್ಷಗಳ ರಾಜಕೀಯ ಹಿಪೊಕ್ರಸಿ ಈಗ ಬಯಲಾದ ಸತ್ಯವಾಗಿದೆ. ಇಂತಹ ಸಂದರ್ಭದಲ್ಲಿ ನಿಯತಿಯಂತಹ ಹೆಣ್ಣು ಮಕ್ಕಳ ಪ್ರಾಮಾಣಿಕತೆಯನ್ನು ಬೆಂಬಲಿಸುವ ಮತ್ತು ದ್ರೌಪದಿಯಂತಹ ಹೆಣ್ಣು ಮಕ್ಕಳ ಅನಕ್ಷರತೆಯನ್ನು ಅಳಿಸಿ ಹಾಕುವ ಕೆಲಸವನ್ನು ಮಹಿಳಾ ಚಳುವಳಿ ಕೈಗೆತ್ತಿಕೊಳ್ಳಬೇಕು. ಇದು ಮಹಿಳಾ ಮೀಸಲಾತಿಗಾಗಿ ನಡೆಸುವ ಹೋರಾಟದಷ್ಟೆ ಮುಖ್ಯವಾದದ್ದು.

- ಎನ್. ಗಾಯತ್ರಿ

ಪರಿಚಯ

# ಎಳೆ ಬಾಳೆ ಸುಳಿ ನಾನವ್ವಾ......

- ಶ್ರೀಮತಿ ಇಂದಿರಾ

## ಹೆಣ್ಣು! ಅದೊಂದು ಹುಣ್ಣು !!




ಇಂದಿಗೂ ಎಷ್ಟೋ ಕುಟುಂಬಗಳಲ್ಲಿ ಮಹಿಳೆಯರ ಬಗ್ಗೆ ಇದಕ್ಕಿಂತ ಹೆಚ್ಚಿನ ಗೌರವ ಭಾವನೆಯೇನೂ ಇಲ್ಲ. ಮೊದಲನೆಯ ಮಗು ಹೆಣ್ಣಾದಾಗ ಅಪ್ಪನ ಕಣ್ಣು ಸಿಟ್ಟಿನಿಂದ ಕೆಂಪಾದರೆ ಎರಡನೆಯದೂ ಹೆಣ್ಣು ಹುಟ್ಟಿದಾಗ ಅಮ್ಮನ ಕಣ್ಣು ಅತ್ತು ಅತ್ತು ಕೆಂಪಾಗಿರುತ್ತದೆ. ಇನ್ನು ಕೆಳವರ್ಗಗಳಲ್ಲಿ ಬಡವರಿಗೆ ಹೆಣ್ಣು ಮಗು ಹುಟ್ಟಿದರೆ ಸಂಭ್ರಮವೆಲ್ಲಿಬಂತು? 4-5 ವರ್ಷಗಳಾಗುವಷ್ಟರಲ್ಲೇ ಕೆಲಸ ಕಲಿಯುವ ನೆಪದಲ್ಲಿ ಅವಳನ್ನು ಎಲ್ಲ ರೀತಿಯ ಶಿಸ್ತು ನಿಯಮಗಳಿಗೊಳಪಡಿಸಿ ಚಿಕ್ಕ ಪುಟ್ಟ ಕೆಲಸಗಳನ್ನು ಮಾಡಿಸಿಯೇ ಹೆತ್ತವರು ಬೆಳೆಸಿರುತ್ತಾರೆ. ಶ್ರೀಮಂತರ ಹಾಗೂ ಬಡವರ ಮಧ್ಯೆ ಇರುವ ಅಂತರದಿಂದಾಗಿ ಮನೆಯ ಚಿಕ್ಕಪುಟ್ಟ ಕೆಲಸಗಳನ್ನು ಮಾಡಿಕೊಡಲು ಬಡವರೇ ಶ್ರೀಮಂತರ ಮನೆಗಳಿಗೆ ತಮ್ಮ ಮಕ್ಕಳನ್ನು ಕಳುಹಿಸುತ್ತಾರೆ. ಇದು ಮುಂದುವರೆದು ಲೆಕ್ಕಾಚಾರದ ಹಂತ ತಲುಪಿದಾಗ ಚಿಕ್ಕ ಮಕ್ಕಳನ್ನು ಅವರ ದೈಹಿಕ ಸಾಮರ್ಥ್ಯಕ್ಕಿಂತ ಹೆಚ್ಚಿಗೆ ದುಡಿಸಿಕೊಳ್ಳುವ ಮತ್ತು ಶೋಷಣೆಯ ಒಂದು ವರ್ತುಲವಾಗಿ ಮಾರ್ಪಾಡಾಗುತ್ತದೆ.

ಪ್ರಸ್ತುತ ಈ ಪುಸ್ತಕದಲ್ಲಿ ಗೃಹಕಾರ್ಮಿಕರಾಗಿ ದುಡಿಯುತ್ತಿರುವ ಎಳೆಯ ಬಾಲಕಿಯರನ್ನು ಸಂದರ್ಶಿಸಿ ಅವರ ಬಾಯಿಂದಲೇ ಅವರ ನರಕ ಸದೃಶ ಜೀವನವನ್ನು ಒಂದು ಸಮೀಕ್ಷೆಯ ಮೂಲಕ ತಿಳಿಸಲಾಗಿದೆ. ಎಷ್ಟೋ ಕಡೆ ಶ್ರೀಮಂತ ವರ್ಗ ಬಡವರಿಗೆ ಉಪಕಾರ ಮಾಡುವ ನೆಪದಲ್ಲಿ ಸಾಲಗಳನ್ನು ಕೊಟ್ಟು, ಅದು ಮರುಪಾವತಿಯಾಗದ ಸಂದರ್ಭದಲ್ಲಿ ಬಡವರ ಮಕ್ಕಳನ್ನು ತಮ್ಮ ಮನೆಯ ಚಾಕರಿಗೆ ಇರಿಸಿಕೊಳ್ಳುವುದು ಸರ್ವೇಸಾಮಾನ್ಯವಾಗಿದೆ. ಮಕ್ಕಳಿಂದ ಕೆಲಸ ಮಾಡಿಸುವ 'ಜಾಣತನ' ಹೊಂದಿರುವ ಶ್ರೀಮಂತರು ಕಡಿಮೆ ಸಂಬಳಕ್ಕೆ ಹೆಚ್ಚು ಕೆಲಸವನ್ನು ಸಹಜವಾಗಿಯೇ ಮಾಡಿಸುತ್ತಾರೆ. ದೈಹಿಕವಾಗಿ-ಮಾನಸಿಕವಾಗಿ ಮತ್ತು ಲೈಂಗಿಕವಾಗಿ ಮಕ್ಕಳನ್ನು ಹೇಗೆ ಶೋಷಿಸಲಾಗುವುದೆಂಬ ಒಂದು ಚಿತ್ರಣ ಈ ಪುಸ್ತಕದಲ್ಲಿದೆ. ಲೇಖಕಿ ಪಿ.ಎ. ಉಷಾ ಮೈಸೂರಿನ ಕೆಲವು ಮನೆಗಳನ್ನು ಸಂದರ್ಶಿಸಿ ಅಲ್ಲಿ ಕೆಲಸಕ್ಕಿರುವ ''ಕೆಲಸದ ಹುಡುಗಿ''ಯರನ್ನೂ ಮನೆಯ ಗೃಹಿಣಿಯರನ್ನೂ ಮಾತನಾಡಿಸಿ ಕೆಲವೊಂದು ವಿಚಾರಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಮಾನವೀಯತೆಯನ್ನು ಮೀರಿ ನಡೆಯುವ ಕೆಲ ಘಟನೆಗಳಲ್ಲಿ ನಮಗೆ ಪರಿಚಯವಾಗುತ್ತಿವೆ.

ನಮ್ಮ ಸರಕಾರಗಳ ಕಾನೂನು ಈ ಮಕ್ಕಳ ಬಗ್ಗೆ ಏನು ಹೇಳುತ್ತದೆ ಎಂಬುದು ತುಂಬ ಗಂಭೀರವಾಗಿ ಪರಿಗಣಿಸಬೇಕಾಗಿದೆ. ಸರಕಾರಗಳು ಬಾಲಕಾರ್ಮಿಕರಿಂದ ಕೆಲಸ ಮಾಡಿಸಿಕೊಳ್ಳುವುದನ್ನು ನಿಷೇಧಿಸುತ್ತವೆಯೇ ಹೊರತು ಬಡವರ ಒಂದು ಹೊತ್ತಿನ ಊಟದ ಬಗ್ಗೆ ಗಂಭೀರವಾಗಿ ಯೋಚಿಸುವುದಿಲ್ಲ. ಮಕ್ಕಳನ್ನು ದುಡಿತಕ್ಕೆ ಹಚ್ಚದೆ ಶಾಲೆಗೆ ಕಳಿಸಿ ಎಂದಷ್ಟೇ ಅವು ಹೇಳುತ್ತವೆ. ಮಕ್ಕಳನ್ನು ಸಾಕಲೂ ಆರ್ಥಿಕವಾಗಿ ಶಕ್ತವಲ್ಲದ ಬಡವರು ಶಾಲೆಗೆ ಎಲ್ಲಿಂದ ಹಣ ಹೊಂದಿಸುತ್ತಾರೆ? ಹೆತ್ತವರಂತೂ ಶಾಲೆಗೆ ಕಳಿಸುವ ಬದಲು ದುಡಿತಕ್ಕೆ ಕಳಿಸಿದರೆ ಮನೆಯ ಆದಾಯ ಹೆಚ್ಚುತ್ತದೆಂದು ವಾದಿಸುತ್ತಾರೆ. ಶಾಲೆಗೆ ಹೋಗಿ 'ವಿದ್ಯೆ' ಕಲಿಯುವ ಬದಲು 'ಕೆಲಸ' ಕಲಿಯುವುದು ಮೇಲು ; ಹೇಗಾದರೂ ನಾಲ್ಕು ಮನೆಯ ಕೆಲಸ ಮಾಡಿ ತನ್ನ ಬದುಕು ನೋಡಿಕೊಳ್ಳುತ್ತಾರೆನ್ನುವುದು ಬಡವರ ವಾದ. ಇಂದಿನ ಶಾಲೆ ಕಲಿತ ನಿರುದ್ಯೋಗಿಗಳನ್ನು ನೋಡಿದಾಗ ಈ ಮಾತನ್ನು ತಳ್ಳಿಹಾಕುವುದು ಹೇಗೆ? ಆದರೂ ಸಿರಿವಂತರ ಮನೆಗೆಲಸಕ್ಕೆ ಮಕ್ಕಳನ್ನು ಕಳಿಸುವ ಹೆತ್ತವರು ಇಂದಿನ ತುರ್ತು ಹಣದ ತಾತ್ಕಾಲಿಕ ಜರೂರನ್ನು ಪರಿಗಣಿಸುತ್ತಾರೆ. ಹೀಗಾಗಿ ಗೃಹಕಾರ್ಮಿಕ ಹೆಣ್ಣು ಮಕ್ಕಳ ಸ್ಥಿತಿ ತುಂಬ ಕರುಣಾ ಜನಕವಾಗಿದೆ.

ಈ ಪುಸ್ತಕದಲ್ಲಿ ಸಮೀಕ್ಷೆಯಿಂದ ಕಂಡುಕೊಂಡು ದಾಖಲಿಸಿರುವ ಕೆಲವು ಸತ್ಯಗಳು ತುಂಬ ಕಹಿಯಾಗಿವೆ. ಅವೆಂದರೆ :- ಕೆಲಸದ ಹುಡುಗಿಯಾಗಿ ಬಾಳು ಪ್ರಾರಂಭಿಸಿ ಮುಂದೆ ಮನೆಗೆಲಸದ ಹೆಂಗಸಾಗಿ ದುಡಿಯುತ್ತಲೇ ಇದ್ದು ಕೊನೆಗೆ ಕೆಲಸ ಮಾಡಲು ಸಾಧ್ಯವಿಲ್ಲದ ವೃದ್ಧೆಯಾಗುತ್ತಾ ಸಾಗಿ ಬಂದ ಜೀವನದಲ್ಲಿ ತಾನು ಏನೇನೂ ಗಳಿಸಲು ಸಾಧ್ಯವಾಗದೆ ಇರುವುದು ತುಂಬ ನೋವಿನ ಸಂಗತಿ. ಇನ್ನು ತನ್ನ ಮಕ್ಕಳು ಮೊಮ್ಮಕ್ಕಳಿಗೂ ಅದೇ ಜೀವನ - ಕೆಲಸದ ಹುಡುಗಿಯಾಗಿ - ಮುಂದೆ ಅದೇ ಜೀವನ ಚಕ್ರ! ನಮ್ಮ ದೇಶದ ಎಲ್ಲ ಸಮಸ್ಯೆಗಳಂತೆ ಇದೂ ಒಂದು ಅನಿವಾರ್ಯವಾಗಿದೆ. ಈ ನಿಟ್ಟಿನಲ್ಲಿ ಕೆಲವು ಸಮಾಜ ಸುಧಾರಣೆಯತ್ತ ಲೇಖಕಿ ತಮ್ಮ ಗಮನ ಹರಿಸಿ ಕೆಲವು ಸೂಚನೆಗಳನ್ನು ಕೊಟ್ಟಿದ್ದಾರೆ. ಮಕ್ಕಳ ಹಕ್ಕುಗಳ ಒಡಂಬಡಿಕೆಯ ಪರಿಚ್ಛೇದಗಳನ್ನು ಈ ಪುಸ್ತಕದಲ್ಲಿ ಜನ ಜಾಗೃತಿಗಾಗಿ ಕೊಡಲಾಗಿದೆ. ನಮ್ಮ ನಾಗರಿಕ ಸಮಾಜದಲ್ಲಿ ಬಾಲ ಕಾರ್ಮಿಕರ ಬವಣೆಗಳಿಗೊಂದು ಪರಿಹಾರ ಇರಬಹುದೆ? ಎಲ್ಲ ಪ್ರಜೆಗಳೂ ಯೋಚಿಸಬೇಕಾದ ವಿಷಯ.

★

# ಮರಳುಗಾಡಿನ ಕುಸುಮ

- ಭಾರತಿ ಮೋಹನ ಕೋಟಿ

## ಮೊಗದಿಶು

ಮೊಗದಿಶು, ಹಿಂದೂಮಹಾಸಾಗರದ ಕರಾವಳಿಯಲ್ಲಿಯ ಒಂದು ಬಂದರು. ಹಾಗೂ ಸುಂದರ ಪಟ್ಟಣವಾಗಿದೆ. ದಾರಿಗುಂಟ ಎತ್ತರೆತ್ತರವಾಗಿದ್ದ ಬಿಳೀ ಕಟ್ಟಡಗಳನ್ನೂ ಹೂ ಬಿಟ್ಟ ತಾಳೆಮರಗಳನ್ನು ಕತ್ತೆತ್ತಿ ನೋಡುತ್ತಾ ಮುನ್ನಡೆದೆ.

ಮೊಗದಿಶು ತಲುಪಿದಾಗ ನಾನು ಊರು ಬಿಟ್ಟು ವಾರಗಳೇ ಕಳೆದಿದ್ದವು. ದಾರಿಗುಂಟ ಬರುವಾಗ ನನಗೆ ಚಿಕ್ಕಪ್ಪ ದೊಡ್ಡಪ್ಪಗಳ ಮಕ್ಕಳು ಆಶ್ರಯ ನೀಡಿದರು. ಅಮನ್ ಕುರಿತು ಹೇಳಿದ್ದಲ್ಲದೇ ಪಯಣದ ಖರ್ಚಿಗೆ ಹಣ ಕೂಡಿಸಿಕೊಟ್ಟರು. ಪಟ್ಟಣ ತಲುಪಿದ್ದೇ ನಾನು ಮಾರುಕಟ್ಟೆಯಲ್ಲಿ ಹೆಂಗಸೊಬ್ಬಳನ್ನು ಅಮನ್‌ಳ ಮನೆ ಎಲ್ಲಿ ಎಂದು ವಿಚಾರಿಸಿದೆ. ಅವಳು ನಾನು ನೋಡಲು ಥೇಟ್ ಅಮ್ಮನ್ನಳನ್ನೇ ಹೋಲುತ್ತೇನೆಂದು ಉದ್ಗರಿಸಿ ಅಮನ್ನಳ ಮನೆ ತೋರಿಸಲು ಅವಳ ಮಗನನ್ನು ಕಳಿಸಿದಳು. ನಿರ್ಜನ ಬೀದಿಗಳನ್ನು ಹಾಯ್ದು ನಾವು ಒಂದು ಚಿಕ್ಕ ಓಣಿ ತಲುಪಿದೆವು. ಅಲ್ಲೇ ಇದ್ದ ಚಿಕ್ಕ ಮನೆಯೊಂದರಲ್ಲಿ ಅಮನ್ ಮಲಗಿ ನಿದ್ರಿಸುತ್ತಿದ್ದಳು. ಅವಳನ್ನೆಬಿಸಿದ ನನ್ನನ್ನು ನೋಡಿ ನಿದ್ದೆ ಮಬ್ಬಿನಲ್ಲಿ 'ಹೇ ನೀನಿಲ್ಲಿ ಏನು ಮಾಡುತ್ತಿರುವಿ' ಎಂದು ಕೂಗಿ ಕನಸೋ ಏನೋ ಎಂದು ಕಣ್ಣುಜ್ಜಿಕೊಂಡು ಎದ್ದು ಕುಳಿತಳು. ನಾನು ನನ್ನ ಕಥೆಯನ್ನು ಸಂಕ್ಷಿಪ್ತವಾಗಿ ಹೇಳಿದೆ. ಕೊನೆಗೂ ನನ್ನ ಸುಖ-ದುಃಖ ಕೇಳುವರೊಬ್ಬರು ದೊರೆತರು. ಅಮನ್ ಅಲ್ಲಿಯೇ ಒಬ್ಬನನ್ನು ಮದುವೆಯಾಗಿದ್ದಳು. ಅವಳ ಗಂಡ ಕಷ್ಟಪಟ್ಟು ದುಡಿಯುವವನಾಗಿದ್ದ. ಸದ್ಯದಲ್ಲಿಯೇ ಅವಳು ತಾಯಿಯಾಗುವವಳಿದ್ದಳು.

ಇಕ್ಕಟ್ಟಾದ ಆ ಪುಟ್ಟ ಮನೆಯಲ್ಲಿಯೇ ನನಗಿಷ್ಟ ಬಂದಷ್ಟು ದಿನವಿರುವುದಕ್ಕೆ ಅವಳು ಒಪ್ಪಿದಳು. ನಾನು ಆ ಮನೆ ಗುಡಿಸಿ, ಸಾರಿಸಿ ಓರಣಗೊಳಿಸಿದೆ. ಬಟ್ಟೆ ಒಗೆಯುವುದು, ತರಕಾರಿ, ದಿನಸಿ ತರುವುದು, ಪಾತ್ರ ತೊಳೆಯುವುದು ಇವುಗಳಲ್ಲೇ ದಿನಕಳೆಯುವುದರಲ್ಲಿ ಅಮನ್ ಮಗುವಿಗೆ ಜನ್ಮ ನೀಡಿದಳು. ಮಗುವಿನ ಲಾಲನೆ ಪಾಲನೆಯೂ ನನ್ನದೇ ಆಯ್ತು.

ಬರಬರುತ್ತ ನನಗೆ - ಅಕ್ಕನಿಗೆ ಹೊಂದಾಣಿಕೆ ಸಾಧ್ಯವಿಲ್ಲವೆಂದು ಸ್ಪಷ್ಟವಾಯಿತು. ಅವಳು ದರ್ಪದವಳಿದ್ದು ನನ್ನನ್ನು ತೀರ ಚಿಕ್ಕವಳಂತೆ ನಡೆಸಿಕೊಳ್ಳುತ್ತಿದ್ದಳು. ನಾನು ಅಕ್ಕನ ಮನೆ ತೊರೆದು ಅದೇ ಊರಿನಲ್ಲಿ ನನ್ನ ಚಿಕ್ಕಮ್ಮ(ತಾಯಿಯ ತಂಗಿ)ನನ್ನು ಹುಡುಕಿಕೊಂಡು ಹೋದೆ. ಸ್ವಲ್ಪ ದಿನಗಳ ಮಟ್ಟಿಗೆ ಅವರ ಮನೆಯಲ್ಲಿ ಇರಲು ತೀರ್ಮಾನಿಸಿದೆ. ಯಥಾಪ್ರಕಾರ ಗುಡಿಸುವುದು, ಸಾರಿಸುವುದು, ತೊಳೆಯುವುದು ಮುಂತಾದ ಕೆಲಸ ಮಾಡಿಕೊಂಡು ದಿನಕಳೆಯತೊಡಗಿದೆ.

ಅಮ್ಮ ಒಬ್ಬಳನ್ನೇ ಬಿಟ್ಟು ಬಂದದ್ದು ನನ್ನ ಮನಸ್ಸಿನಲ್ಲಿ ಆಗಾಗ ಚುಚ್ಚುತ್ತಿತ್ತು. ತುಸು ಹಣವನ್ನಾದರೂ ಅವಳಿಗೆ ಕಳಿಸಿದರೆ ಸಹಾಯವಾದೀತೆಂದು ಕೆಲಸ ಹುಡುಕಲು ಅಲೆದೆ. ಕೊನೆಗೆ ಕಟ್ಟಡ ಕಟ್ಟುವ ಕೆಲಸ ನಡೆಯುತ್ತಿರುವಲ್ಲಿ ಹೋಗಿ ಸೇರಿಕೊಂಡೆ. ಮಾರನೆಯ ದಿನದಿಂದ ನನ್ನ ದುಡಿಮೆ ಆರಂಭವಾಯ್ತು. ಭಾರವಾದ ಬುಟ್ಟಿ ಎತ್ತಿ ಎತ್ತಿ ಬೆನ್ನು ಮುರಿವಂಥ ನೋವು ಅನುಭವಿಸಿದ್ದಲ್ಲದೇ ಅಂಗೈ ತುಂಬ ಬೊಬ್ಬೆಗಳೆದ್ದವು. ನಾನು ಕೆಲಸ ಬಿಡುವೆನೆಂದೇ ಉಳಿದವರು ತೀರ್ಮಾನಿಸಿದರು. ಆದರೆ ಒಂದು ತಿಂಗಳು ಬಿಟ್ಟೂ ಬಿಡದಂತೆ ಕೆಲಸ ಮಾಡಿ 60 ಡಾಲರ್ ಉಳಿಸಿ ಪರಿಚಿತರೊಡನೆ ಅಮ್ಮನಿಗೆ ಕಳಿಸಿದೆ. ಆದರೆ ಅದರಲ್ಲಿ ಒಂದು ಪೆನ್ನಿಯೂ ಅವಳಿಗೆ ತಲುಪಲಿಲ್ಲ.

ನಾನಿದ್ದ ಮನೆಯಲ್ಲಿ ಕೆಲಸ ಮಾಡಿಕೊಂಡು ಇರುತ್ತಿರುವಾಗ ಅಲ್ಲಿಗೆ ಸೋಮಾಲಿಯಾದ ಮೊಹಮ್ಮದ್ ಚಾಮಾ ಫರ್ಹಾ ಎಂಬ ವ್ಯಕ್ತಿ ಇಂಗ್ಲೆಂಡಿನ ರಾಯಭಾರಿ ಎಂದು ನೇಮಿಸಲ್ಪಟ್ಟವರು ಬಂದರು. ಅವರು ನನ್ನ ತಾಯಿಯ ಮತ್ತೊಬ್ಬ ತಂಗಿಯನ್ನು ಮದುವೆಯಾಗಿದ್ದರು.

ನಾನು ಕಸಗುಡಿಸುತ್ತಿರುವಾಗ ಪಕ್ಕದ ಕೋಣೆಯಿಂದ ಆ ವ್ಯಕ್ತಿ ಮಾತನಾಡುವುದು ಕೇಳಿಸಿತು. ನಾಲ್ಕು ವರ್ಷಕಾಲ ಲಂಡನ್ನಿನಲ್ಲಿರಬೇಕಾದುದರಿಂದ ಅವರಿಗೆ ನಮ್ಮ ಜನರಲ್ಲಿಯೇ ಯಾರಾದರೂ ಒಬ್ಬಳು ಕೆಲಸದ ಹುಡುಗಿ ಬೇಕಾಗಿದ್ದಳು. ಈ ಅವಕಾಶ ಉಪಯೋಗಿಸಿಕೊಳ್ಳುವ ಉದ್ದೇಶದಿಂದ ನಾನು ಚಿಕ್ಕಮ್ಮನನನ್ನು ಕರೆದು ''ನಾನು ಅವರೊಡನೆ ಹೋಗಿ ಕೆಲಸ ಮಾಡಿಕೊಂಡಿರುವೆನು, ಕರೆದೊಯ್ಯುತ್ತಾರಾ ಕೇಳು'' ಎಂದೆನು. ಅದರಂತೆ ನನ್ನ ಪರವಾಗಿ ಚಿಕ್ಕಮ್ಮ ಒಳ್ಳೆಯ ಮಾತನಾಡಿ ನನ್ನನ್ನು ಕರೆದೊಯ್ಯಲು ಶಿಫಾರಸು ಮಾಡಿದಳು. ನಾನು ಎದುರಿಗೆ ಹೋಗಿ ನಿಂತೆ. ಮೊಹಮ್ಮದ ಅವರು ಹುಬ್ಬುಗಂಟಿಕ್ಕಿ ನನ್ನ ಕಡೆ ನೋಡಿ ಒಂದು ನಿಮಿಷ ಸುಮ್ಮನೆ ಕುಳಿತರು. ಆಮೇಲೆ, ''ಆಯ್ತು ನಾಳೆ ಮಧ್ಯಾಹ್ನ ಲಂಡನ್ನಿಗೆ ಹೊರಡಲು ಸಿದ್ಧಳಾಗಿರು' ಎಂದರು.

ಲಂಡನ್ ಎಲ್ಲಿದೆಯೆಂದು ಗೊತ್ತಿರದಿದ್ದರೂ ತುಂಬ ದೂರವಿದೆಯೆಂದು ಗೊತ್ತಿತ್ತು. ದೂರ ಬಲುದೂರಹೋಗುವುದೇ ನನಗೂ ಬೇಕಾಗಿತ್ತು. ಉತ್ಸುಕತೆಯಿಂದ ತುದಿಗಾಲ ಮೇಲೆ ನಿಂತು ಹೋಗುವ ಕ್ಷಣಕ್ಕಾಗಿ ಕಾಯತೊಡಗಿದೆ.

ಮರುದಿನ ಚಿಕ್ಕಪ್ಪ ಮೊಹಮ್ಮದ ನನ್ನ ಪಾಸ್‌ಪೋರ್ಟ್ ತೆಗೆಸಿ

ತಂದುಕೊಟ್ಟರು. ಮೂಕವಿಸ್ಮಿತಳಾಗಿ ಅದನ್ನು ನೋಡಿದೆ - ನನ್ನ ಹೆಸರು ಹೊತ್ತ ಕಾಗದವನ್ನು ಪ್ರಪ್ರಥಮವಾಗಿ ನೋಡುತ್ತಿದ್ದೆ. ಚಿಕ್ಕಮ್ಮನನ್ನು ತಬ್ಬಿಕೊಂಡು ವಿದಾಯ ಹೇಳಿ ಹೊರಟೆ.

## ಸೇವಕಿಯಾಗಿ ಲಂಡನ್ನಿಗೆ

ಕಾರಿನಲ್ಲಿ ಕುಳಿತು ಬೆಳಿಗ್ಗೆ ವಿಮಾನನಿಲ್ದಾಣದಿಂದ ಹೊರಬಿದ್ದು ಲಂಡನ್ನಿನ ರಸ್ತೆಯ ಮೇಲೆ ಹೊರಟಂತೆ ಸುತ್ತಲೂ ಬಿಳೀ ರೋಗಿಷ್ಟ ಮುಖಗಳನ್ನು ನೋಡಿ ನೋಡಿ ನನಗೆ ಒಂದೂ ನಮೂನೆಯ ವಿಷಾದ ಹಾಗೂ ಒಂಟಿತನದ ಭಾವನೆ ಕಾಡತೊಡಗಿತು.

ಥಾಕುಲೀಕಿನ ಮನೆಗಳನ್ನು ದಾಟಿ ನಮ್ಮ ಕಾರು ರಸ್ತೆಯ ಮೇಲೆ ತೇಲುತ್ತಾ ಹೊರಟಂತೆ ದಾರಿ ಇಕ್ಕೆಲಗಳಲ್ಲಿ ಮಂಜು ಉದುರಿ ಬೆಳ್ಳಗಾಗಿತ್ತು. ಚಿಕ್ಕಪ್ಪನ ನಾಲ್ಕು ಅಂತಸ್ತಿನ ಅರಮನೆಯಂಥ ಮನೆಯ ಮುಂದೆ ಕಾರು ನಿಂತಾಗ ಅಚ್ಚರಿಯಿಂದ ಮೂಕಳಾದೆ. ಪಾವಟಿಗೆಗಳ ಹತ್ತಿರ ನಿಂತಿದ್ದ ಚಿಕ್ಕಮ್ಮ ನಮ್ಮನ್ನು ಸ್ವಾಗತಿಸಿದಳು. 'ಒಳಗೆ ಬಾ, ಹಾಗೇ ಬಾಗಿಲು ಮುಚ್ಚು' ಎಂದವಳು ನೀರಸವಾಗಿ ಹೇಳಿದಾಗ ಅವಳನ್ನಪ್ಪಿಕೊಂಡು ಪ್ರೀತಿ ವ್ಯಕ್ತಪಡಿಸಬೇಕೆಂದಿದ್ದ ನನ್ನ ಆಸೆ ಅಲ್ಲೇ ತಣ್ಣಗಾಯಿತು. ಅವಳ ಪಾಶ್ಚಿಮಾತ್ಯ ಉಡುಪು, ನಿಂತ ಭಂಗಿ ನನ್ನ ಉತ್ಸಾಹಕ್ಕೆ ತಣ್ಣೀರೆರಚಿದವು.

'ಬಾ, ಮೊದಲು ನಿನಗೆ ಮನೆ ತೋರಿಸಿ ನಿನ್ನ ಕೆಲಸಕಾರ್ಯಗಳನ್ನು ಪರಿಚಯಿಸುವೆ' ಎಂದ ಚಿಕ್ಕಮ್ಮನಿಗೆ 'ನಾನು, ತುಂಬ ದಣಿದಿದ್ದೇನೆ ನನಗೆ ಮಲಗಬೇಕಾಗಿದೆ. ಮಲಗಬಹುದಲ್ಲವಾ?' ಎಂದೆ. ಚಿಕ್ಕಮ್ಮ ನನ್ನ ಕೋಣೆಗೆ ಕರೆದೊಯ್ದು ನನ್ನ ಮನೆಯಷ್ಟೇ ವಿಶಾಲವಾದ ಹಾಸಿಗೆಯನ್ನು ತೋರಿಸಿದಳು. ನನ್ನ ಜೀವನದಲ್ಲೇ ಅಂಥ ಮೆತ್ತನೆಯ ಹಾಸಿಗೆಯನ್ನು ಕಂಡಿರಲಿಲ್ಲ. ಹೊದಿಕೆಯಡಿ ತೂರಿಕೊಂಡದ್ದಷ್ಟೇ ಗೊತ್ತು ನಿದ್ರೆಯ ಆಳಕ್ಕೆ ಜಾರಿದೆ.

ಮರುದಿನ ಬೆಳಿಗ್ಗೆ ಮನೆಯೆಲ್ಲ ಸುತ್ತಾಡುತ್ತಿದ್ದ ನನ್ನನ್ನು ನೋಡಿ ಚಿಕ್ಕಮ್ಮ 'ಓಹ್, ಒಳ್ಳೇದಾಯ್ತು ನೀನು ಎದ್ದಿದ್ದು ಬಾ ಅಡಿಗೆಮನೆಗೆ ಹೋಗೋಣ, ನೀನೇನು ಮಾಡಬೇಕು ಹೇಳಿಕೊಡುವೆ'' ಎಂದಳು - ಅಡಿಗೆಮನೆಯತ್ತ ನಡೆಯುತ್ತಾ ಅವಳನ್ನೇ ಹಿಂಬಾಲಿಸಿದ ನಾನು ಅಡಿಗೆ ಕೋಣೆ ಕಂಡು ದಿಗ್ಭ್ರಾಂತಳಾದೆ. ಸುತ್ತಲೂ ನೀಲಿಬಣ್ಣದ ಹೊಳಪು ನೆಲ, ಕೆನೆಬಣ್ಣದ ಕಪಾಟುಗಳಿದ್ದು ಮಧ್ಯದಲ್ಲಿ ಆರು ಒಲೆಯ ಸ್ಟೋವ್ ನಿಂತಿತ್ತು. ಚಿಕ್ಕಮ್ಮ ಒಂದೊಂದೇ ಕಪಾಟಿನ ಬಾಗಿಲು ತೆರೆದು ಪಾತ್ರೆಪಡಗ, ಚಾಕು, ಚಮಚ, ಒರಟು ಒರೆಸುವ ಬಟ್ಟೆ ಎಲ್ಲವನ್ನೂ ತೋರಿಸತೊಡಗಿದಳು. 'ಬೆಳಿಗ್ಗೆ ಆರೂವರೆಗೆಲ್ಲ ನಿನ್ನ ಚಿಕ್ಕಪ್ಪನಿಗೆ ವನಸ್ಪತಿ ಚಹಾ ಮತ್ತು ಎರಡು ಬೇಯಿಸಿದ ಮೊಟ್ಟೆಗಳ ನಾಷ್ಟಾ ಸಿದ್ಧಪಡಿಸಬೇಕು. ಏಳಕ್ಕೆ ನನ್ನ ಕೋಣೆಯಲ್ಲೇ ನನಗೆ ಕಾಫೀ ಬೇಕು. ಆಮೇಲೆ ದೋಸೆ ಮಾಡಿದೆಯೆಂದರೆ ಮಕ್ಕಳು ಎಂಟಕ್ಕೆಲ್ಲ ತಿಂದು ಬಿಡುವರು. ನಾಷ್ಟಾದ ನಂತರ..' ಒಂದೇ ಉಸಿರಿನಲ್ಲಿ ಹೇಳುತ್ತಿದ್ದ ಚಿಕ್ಕಮ್ಮನ ಮಾತನ್ನು ಅರ್ಧದಲ್ಲೇ ತುಂಡರಿಸಿ ''ಚಿಕ್ಕಮ್ಮ ಇದನ್ನೆಲ್ಲ ನನಗೆ ಕಲಿಸುವವರು ಯಾರು? ದೋಸೆ ಹಾಗೆಂದರೇನು?'' ಎಂದು ನಾನು ಕೇಳಿದೆ. ''ಇಂದು ಇವನ್ನೆಲ್ಲ ನಾನೇ ಮಾಡುವೆ ವಾರಿಸ್, ಲಕ್ಷ್ಯಗೊಟ್ಟು ಕಲಿತುಕೋ'' ಎಂದಳು ಚಿಕ್ಕಮ್ಮ. ನಾನು ಬರೀ ತಲೆಯಾಡಿಸಿದೆನಷ್ಟೆ.

ಮರುದಿನದಿಂದ ಹೀಗೆ ಪ್ರಾರಂಭವಾದ ನನ್ನ ದಿನಚರಿ ತಪ್ಪದೇ ನಾಲ್ಕುವರುಷ ಮುಂದುವರೆಯಿತು. ಸಮಯದ ಪರಿವೆ ಇಲ್ಲದೆ ಬೆಳೆದ ನಾನು ಗಡಿಯಾರದೊಡನೆ ಬದುಕಲು ಕಲಿತೆ.

ನಾಷ್ಟಾದ ನಂತರ ಅಡಿಗೆಮನೆ ಸ್ವಚ್ಛಗೊಳಿಸಿ ಚಿಕ್ಕಮ್ಮನ ಮಲಗುವ ಕೋಣೆ ಹಾಗೂ ಶೌಚದ ಕೋಣೆಯನ್ನು ಶುಚಿಗೊಳಿಸುತ್ತಿದ್ದೆ. ಮನೆಯ ಪ್ರತಿಯೊಂದು ಕೋಣೆಯನ್ನೂ ಗುಡಿಸುತ್ತ ಧೂಳು ಹೊಡೆಯುತ್ತ ಒರೆಸುತ್ತ ನಾಲ್ಕು ಅಂತಸ್ತುಗಳನ್ನು ಸುತ್ತುತ್ತಿದ್ದೆ. ಮಧ್ಯರಾತ್ರಿಯವರೆಗೂ ಅವಿಶ್ರಾಂತವಾಗಿ ದುಡಿದು ದಣಿದು ಮಲಗುತ್ತಿದ್ದೆ. ಒಂದು ದಿನವೂ ಈ ಕೆಲಸಗಳಿಂದ ನನಗೆ ಬಿಡುವು ದೊರೆಯಲಿಲ್ಲ.

1983ರ ಬೇಸಿಗೆಯಲ್ಲಿ ಮೊಹಮ್ಮದ್ ಚಿಕ್ಕಪ್ಪನ ತಂಗಿ ಚಿಕ್ಕಹೆಣ್ಣು ಮಗುವೊಂದನ್ನು ಬಿಟ್ಟು ತೀರಿಕೊಂಡಳು. ಆ ಹೆಣ್ಣು ಮಗು ಸೋಫಿ ನಮ್ಮೊಡನೆ ವಾಸಿಸತೊಡಗಿತು. ಸೋಫಿಯನ್ನು ಹತ್ತಿರದ ಪ್ರಾಥಮಿಕ ಶಾಲೆಗೆ ಸೇರಿಸಿದ ನಂತರ ಅವಳನ್ನು ಶಾಲೆಗೆ ಬಿಟ್ಟು ಬರುವ ಕೆಲಸವೂ ನನ್ನ ಪಾಲಿಗೆ ಬಂತು.

ಒಂದು ಮುಂಜಾನೆ ನಾನು ಶಾಲೆಗೆ ಹೊರಟಾಗ ಅಪರಿಚಿತನೊಬ್ಬ ನನ್ನನ್ನು ದಿಟ್ಟಿಸಿ ನೋಡುತ್ತ ನಿಂತಿದ್ದು ಕಂಡಿತು. ಆತ ಬೆಳ್ಳಗಿದ್ದು 40 ವರುಷದವನಿರಬಹುದೆನಿಸಿತು. ತನ್ನ ಮಗಳನ್ನು ಶಾಲೆಗೆ ಕಳಿಸಲು ಬರುತ್ತಿದ್ದ ಅವನು ನನ್ನನ್ನು ದಿಟ್ಟಿಸುತ್ತಿದ್ದನೆಂಬುದರಲ್ಲಿ ಮುಚ್ಚುಮರೆ ಮಾಡುತ್ತಿರಲಿಲ್ಲ. ಪ್ರತಿದಿನ ಬೆಳಿಗ್ಗೆ ಆತನನ್ನು ನೋಡುತ್ತಿದ್ದೆ. ಆತ ಸುಮ್ಮನೇ ಮುಗುಳ್ನಗುತ್ತಿದ್ದ. ಒಂದು ದಿನ ಬಳಿ ಬಂದು ಏನೇನೋ ಮಾತಾಡತೊಡಗಿದ. ಇಂಗ್ಲಿಷ್ ಬಾರದ ನನಗೆ ಅವನೇನು ಹೇಳುತ್ತಿದ್ದಾನೆಂದು ತಿಳಿಯದೇ ಗಾಬರಿಯಿಂದ ಮನೆಗೆ ಓಡಿ ಬಂದೆ.

ಮತ್ತೊಂದು ದಿನ ಆತ ತನ್ನ ಕೈಯಲ್ಲಿ ಒಂದು ಕಾರ್ಡನಿತ್ತು ಹೋದ. ನನ್ನ ಪಾಕೆಟ್‌ನಲ್ಲಿ ಅದನ್ನಿಟ್ಟುಕೊಂಡು ಆತ ಹೋದೆಡೆ ದಿಟ್ಟಿಸುತ್ತ ನಿಂತುಬಿಟ್ಟೆ.

ನನ್ನ ಚಿಕ್ಕಮ್ಮನ ಮಗಳೊಬ್ಬಳಿಗೆ ಆ ಕಾರ್ಡು ತೋರಿಸಿ ಅದರಲ್ಲಿ ಏನು ಬರೆದಿದೆ ಎಂದು ಕೇಳಿದೆ. ಆತ ಒಬ್ಬ ಫೋಟೋಗ್ರಾಫರ್‌ನೆಂದು ತಿಳಿದುಬಂತು. ಸುಮ್ಮನೆ ಅದನ್ನಿಟ್ಟುಕೊಂಡೆ ಅಷ್ಟೆ.

ಚಿಕ್ಕಪ್ಪನ ಸೇವಾವಧಿ ಮುಗಿಯುತ್ತ ಬಂತು. ಆತ ಕುಟುಂಬ ಸಹಿತ ಊರಿಗೆ ಹೋಗುವುದಾಗಿ ತಿಳಿಸಿದ. ನಾನು ಊರಿಗೆ

ಹೋಗಲು ಕಾತರಳಾಗಿದ್ದೆ. ಶ್ರೀಮಂತಳಾಗಿ ಊರಿಗೆ ಹಿಂದಿರುಗಬೇಕೆಂದಿದ್ದ ನನ್ನಲ್ಲಿ ಮನೆಗೆಲಸದ ಚಿಕ್ಕ ಪಗಾರದಿಂದ ಉಳಿಸಿದ ಪುಡಿಗಾಸು ಮಾತ್ರ ಇದ್ದುವು. ಸಾಕಷ್ಟು ಹಣ ಸಂಪಾದಿಸಿ ಅಮ್ಮನಿಗಾಗಿ ಮನೆ ಕೊಳ್ಳಬೇಕೆಂಬುದು ನನ್ನ ಕನಸಾಗಿತ್ತು. ಅದು ನನಸಾಗಲು ನಾನು ಆಫ್ರಿಕಾಕ್ಕೆ ಮರಳದೇ ಇಂಗ್ಲೆಂಡಿನಲ್ಲಿಯೇ ಉಳಿಯುವುದು ಅನಿವಾರ್ಯವಾಗಿತ್ತು. ಹೇಗೋ ಅಲ್ಲೇ ಉಳಿದುಕೊಂಡು ಹಣಮಾಡುವ ವಿಶ್ವಾಸವಿತ್ತು ನನಗೆ.

ಊರಿಗೆ ಮರಳುವ ದಿನ ಸನ್ನಿಹಿತವಾದಂತೆ ಚಿಕ್ಕಪ್ಪ ಎಲ್ಲರಿಗೂ ಅವರವರ ಪಾಸ್‌ಪೋರ್ಟ್‌ಗಳನ್ನು ಸರಿಯಾಗಿ ಹುಡುಕಿ ಇಟ್ಟುಕೊಳ್ಳುವಂತೆ ಹೇಳಿದ. ನನ್ನದನ್ನು ನಾನು ಪ್ಲಾಸ್ಟಿಕ್ ಚೀಲವೊಂದರಲ್ಲ ಹಾಕಿ ಮುಚ್ಚಿ ಅದನ್ನು ಅಂಗಳದಲ್ಲಿ ತೆಗ್ಗುತೋಡಿ ಹುಗಿದಿಟ್ಟೆ. ನನ್ನ ಪಾಸ್‌ಪೋರ್ಟ್ ಸಿಗುತ್ತಿಲ್ಲವೆಂದು ಹೇಳಿ ಊರಿಗೆ ಹೋಗುವುದರಿಂದ ತಪ್ಪಿಸಿಕೊಂಡೆ. 'ನನ್ನನ್ನು ಬಿಟ್ಟು ಹೋಗಿ ಏನೂ ತೊಂದರೆಯಿಲ್ಲ' ಎಂದೆ.

ಅವರು ಬೆಳಿಗ್ಗೆ ಹೊರಡುವವರೆಗೂ ನನನ್ನು ಬಿಟ್ಟು ಹೋಗುವರೆಂಬ ಬಗ್ಗೆ ನನಗೆ ನಂಬಿಕೆಯಿರಲಿಲ್ಲ. ನನ್ನನ್ನು ಬಿಟ್ಟು ಹೊರಟ ಅವರಿಗೆ ಶುಭವಿದಾಯ ಕೋರಿದೆ. ಹೆದರಿಕೆಯಿಂದ ದಿಗಿಲುಗೊಂಡಿದ್ದೆ.

ನನ್ನ ಪುಟ್ಟ ಉಣ್ಣೆಯ ಒರಟು ಚೀಲವನ್ನು ಹೆಗಲಿಗೇರಿಸಿ ಪಾಸ್‌ಪೋರ್ಟ್ ಅದರಲ್ಲಿಟ್ಟುಕೊಂಡು ನಗುತ್ತ ಬೀದಿಗಿಳಿದೆ.

## ನೋಡು ಕನ್ನಡಿಯಲ್ಲಿ ನೋಡು

ಅಂಗಡಿಯಲ್ಲಿ ಹೊಕ್ಕ ನಾನು ಎತ್ತರವಾಗಿದ್ದ ಆಕರ್ಷಕ ಆಫ್ರಿಕನ್ ಮಹಿಳೆಯೊಬ್ಬರು ಸ್ವೆಟರು ಖರೀದಿಸುತ್ತಿರುವುದನ್ನು ಕಂಡೆ. ನಾವು ಪರಸ್ಪರ ಪರಿಚಯ ಮಾಡಿಕೊಂಡು ಇಬ್ಬರು ಸೋಮಾಲಿ ಭಾಷೆಯಲ್ಲಿ ಸಂಭಾಷಿಸತೊಡಗಿದೆವು. ಅವಳ ಹೆಸರು 'ಹಾಲ್ವು' ಎಂದಾಗಿತ್ತು. 'ವಾರಿಸ್ ನೀನೆಲ್ಲಿರುವಿ ಏನು ಮಾಡುತ್ತಿರುವಿ?' ಎಂಬ ಅವಳ ಪ್ರಶ್ನೆಗೆ ನಾನು 'ನನ್ನ ಕುಟುಂಬದವರೆಲ್ಲ ಸೋಮಾಲಿಯಾಕ್ಕೆ ಹೊರಟು ಹೋಗಿದ್ದರಿಂದ ನನಗೆ ನಿಜವಾಗಿಯೂ ಇರಲು ಯಾವ ತಾಣವೂ ಇಲ್ಲವೆಂದೆ.

ಹಾಲ್ವು 'YWCA (ಯಂಗ್ ವುಮನ್ಸ್ ಕ್ರಿಶ್ಚಿಯನ್ ಅಸೋಸಿಯೇಷನ್)ದಲ್ಲಿ ನನ್ನ ಒಂದು ಕೋಣೆಯಿದೆ. ಅದರಲ್ಲಿ ನೀನೂ ಇರಬಹುದು' ಎಂದಳು. ಹಾಲ್ವು ಮತ್ತು ನಾನು ಆತ್ಮೀಯ ಗೆಳೆತಿಯರಾದೆವು. ಕೆಲವು ದಿನಗಳನಂತರ YWCA ದಲ್ಲಿ ನಾನೊಂದು ಕೋಣೆ ಬಾಡಿಗೆಗೆ ತೆಗೆದುಕೊಂಡು ನೌಕರಿ ಹುಡುಕಲು ಆರಂಭಿಸಿದೆ. 'ಇಲ್ಲಿಂದಲೇ ಯಾಕೆ ನಿನ್ನ ಕೆಲಸ ಶುರು ಮಾಡಬಾರದು?' ಎಂದವಳು YWCA ದ ಕಛೇರಿಯತ್ತ ಕೈತೋರಿಸಿದಳು. 'ನನಗೆ ಇಂಗ್ಲೀಷ್ ಸರಿಯಾಗಿ ಬಾರದು, ಬರೆಯಲೂ ಗೊತ್ತಿಲ್ಲ. ನನಗೆ ಕೆಲಸದ ಪರವಾನಿಗೆ ಪತ್ರವೂ ಇಲ್ಲ' ಎಂದೆ.

ಅವಳ ಯತ್ನದಿಂದ ನನಗೆ ಕೆಲಸ ದೊರೆಯಿತು. ಅಡಿಗೆಮನೆಯಲ್ಲಿ ಪಾತ್ರೆ ತೊಳೆಯುವ, ನೆಲ ಗುಡಿಸುವ, ಒರೆಸಿ ಸಾರಿಸುವ ಕೆಲಸ ಪ್ರಾರಂಭಿಸಿದೆ. ರಾತ್ರಿ ಮನೆಗೆ ಹೋಗುವಾಗ ನನ್ನ ಮೈಯೆಲ್ಲ ಹೊಲಸಾಗಿ ಕಮಟು ವಾಸನೆ ಹಿಡಿದಿರುತ್ತಿತ್ತು. ಆದರೂ ನನ್ನ ಕಾಲಮೇಲೆ ನಾನು ನಿಲ್ಲಲು ಅನುವು ಮಾಡಿಕೊಟ್ಟ ಕೆಲಸಕ್ಕೆ ಕೃತಜ್ಞಳಾಗಿದ್ದೆ.

ಕೆಲಸವಿಲ್ಲದ ಉಳಿದ ವೇಳೆಯಲ್ಲಿ ಇಂಗ್ಲಿಷ್ ಓದಲು, ಬರೆಯಲು, ಕಲಿಯಲು ಫ್ರೀ ಲ್ಯಾಂಗುವೇಜ್ ಸ್ಕೂಲಿಗೆ ಹೋಗತೊಡಗಿದೆ. ಎಷ್ಟೋ ವರುಷಗಳನಂತರ ನನಗೆ ಕೆಲಸವಷ್ಟೇ ಅಲ್ಲದೇ ಮತ್ತೇನನ್ನಾದರೂ ಕಲಿಯಲು ಸಿಕ್ಕ ಅವಕಾಶವದು.

ಕೆಲವೊಮ್ಮೆ ಹಾಲ್ವು ನನ್ನನ್ನು ನೈಟ್ ಕ್ಲಬ್‌ಗಳಿಗೆ ಕರೆದೊಯ್ಯುತ್ತಿದ್ದಳು. ಕ್ಲಬ್ಬಿನಲ್ಲಿರುವವರೆಲ್ಲ ಅವಳ ಪರಿಚಿತರಾಗಿದ್ದರು. ಆಫ್ರಿಕಾದ ಸಂಪ್ರದಾಯಸ್ಥ ವಾತಾವರಣದಲ್ಲಿ ಬೆಳೆದ ನಾನು ಅದನ್ನು ಉಲ್ಲಂಘಿಸಿ ಕರಿಯರು, ಬಿಳಿಯರು, ಹೆಣ್ಣುಗಂಡೆಂಬ ಭೇದವಿಲ್ಲದೆ ಎಲ್ಲರೊಡನೆ ಬೆರೆತು ಮಾತಾಡಲು ರೂಢಿಸಿಕೊಂಡೆ. ಹೊಸಪರಿಸರದಲ್ಲಿ ಬದುಕಲು ಏನೇನನ್ನೋ ಕಲಿಯಬೇಕಿತ್ತು. ಅಂತೂ ಹೇಗೋ ಜೀವನ ನಿರ್ವಿಘ್ನವಾಗಿ ಸಾಗಿತ್ತು. ಇಷ್ಟರಲ್ಲಿಯೇ ಅದಕ್ಕೊಂದು ನಾಟಕೀಯ ತಿರುವು ಒದಗಲಿತ್ತು.

ಒಂದು ಮಧ್ಯಾಹ್ನ ಕಚೇರಿಯಿಂದ ಮನೆಗೆ ಹೋದ ಮೇಲೆ ನಾನು ನನ್ನ ಪಾಸ್‌ಪೋರ್ಟ್‌ನಲ್ಲಿಟ್ಟ ಫೋಟೋಗ್ರಾಫರ್ ನೀಡಿದ ಕಾರ್ಡನ್ನು ಈಚೆಗೆಳೆದು ಅದನ್ನು ತೋರಿಸಲು ಹಾಲ್ವುಳ ರೂಮಿಗೆ ಹೋದೆ. ಅದರ ಹಿಂದಿನ ಕಥೆಯನ್ನು ಸಂಕ್ಷಿಪ್ತವಾಗಿ ಹೇಳಿ ನಿಜಕ್ಕೂ ಆ ವ್ಯಕ್ತಿ ಏನು ಹೇಳಬೇಕೆಂದಿದ್ದನೋ ನನಗೆ ತಿಳಿಯಲೇ ಇಲ್ಲ ನೋಡು ಎಂದೆ.

"ಯಾಕೆ ನೀನವನನ್ನು ಭೇಟಿಯಾಗಿ ಮಾತಾಡಬಾರದು?" ಹಾಲ್ವು ಕೇಳದಳು. "ನೀನೇ ಮಾತನಾಡು, ನನ್ನ ಇಂಗ್ಲೀಷ್ ಅಷ್ಟೇನೂ ಚೆನ್ನಾಗಿಲ್ಲ" ಎಂದೆ.

ಹಾಲ್ವು ಫೋಟೋಗ್ರಾಫರ್‌ನೊಡನೆ ಮಾತಾಡಿ ಬಂದಳು. ಅವಳ ಸಲಹೆಯಂತೆ ನಾನು ಮೈಕ್‌ಗಾಸ್‌ನ ಸ್ಟುಡಿಯೋಕ್ಕೆ ಹೋದೆ. ಏನು ನಿರೀಕ್ಷೆ ಮಾಡಿದ್ದೆನೆಂಬುದನ್ನು ಅರಿಯದೆ ಸ್ಟುಡಿಯೋದ ಬಾಗಿಲು ತೆರೆದು ತಡವರಿಸುತ್ತ ಒಂದು ಹೊಸ ಜಗತ್ತನ್ನೇ ಪ್ರವೇಶಿಸಿದೆ. ಸುತ್ತಮುತ್ತೆಲ್ಲ ಸುಂದರ ಹೆಂಗಸರ ಆಳೆತ್ತರದ ಚಿತ್ರಗಳನ್ನು ಅಂಟಿಸಿದ್ದರ, ತೂಗು ಹಾಕಿದ್ದರು. ನನ್ನಷ್ಟಕ್ಕೆ ನಾನೇ ಉದ್ಗರಿಸಿದೆ. 'ಓಹ್! ಇದೇ ನನ್ನ ಸುವರ್ಣಾವಕಾಶ.'

ನನ್ನನ್ನು ನೋಡಿದ ದಿನವೇ ನನ್ನ ಫೋಟೋ ತೆಗೆಯಲು ಇಚ್ಚಿಸಿದ್ದನೆಂದು ಮೈಕ್ ಹೇಳಿದ. ಆಶ್ಚರ್ಯದಿಂದ ಬಾಯಿ ತೆರೆದು ನಾನು ಆತನನ್ನೇ ನೋಡುತ್ತ "ನನ್ನ ಭಾವಚಿತ್ರ! ಇಂಥದ್ದಾ?" ಅಲ್ಲಿದ್ದ ಪೋಸ್ಟರ್‌ಗಳತ್ತ ಕೈತೋರಿಸಿ ಕೇಳಿದೆ.

''ಹೌದು ಅಂಥದ್ದೇ, ನಿನ್ನ ಪಾರ್ಶ್ವಮುಖ ಸೌಂದರ್ಯ ಭಾವಚಿತ್ರಕ್ಕೆ ಹೇಳಿಮಾಡಿಸಿದಂತಿದೆ'' ಮೈಕ್ ಹೇಳಿದ.

ಎರಡು ದಿನಗಳ ನಂತರ ನಾನು ಸ್ಟುಡಿಯೋಕ್ಕೆ ಹೋದೆ. ಮೇಕಪ್ ಮಾಡುವ ಹೆಂಗಸು ನನ್ನನ್ನು ಒಂದು ಬದಿಗೆ ಕೂಡಿಸಿ ಹತ್ತಿ ಬ್ರಶ್, ಸ್ಪಂಜ್, ಕ್ರೀಮ್‌ಗಳು, ಪೇಂಟುಗಳು, ಪೌಡರ್.... ಹೀಗೆ ವಿವಿಧ ಸಾಮಗ್ರಿಗಳೊಂದಿಗೆ ಕೆಲಸ ಆರಂಭಿಸಿದಳು. ಅವಳ ಬೆರಳು ಬಿಡುವಿಲ್ಲದೇ ನನ್ನ ಮುಖದ ತುಂಬ ಓಡಾಡತೊಡಗಿದವು.

ಕೊನೆಗೊಮ್ಮೆ ಅವಳು ಒಂದೆರಡು ಹೆಜ್ಜೆ ಹಿಂದೆ ಸರಿದು ನನ್ನನ್ನೇ ತೃಪ್ತಿಯಿಂದ ನೋಡುತ್ತ ''ಈಗ ಹೋಗಿ ಕನ್ನಡಿಯಲ್ಲಿ ನಿನ್ನ ಮುಖ ನೋಡಿಕೋ'' ಎಂದಳು.

ಕನ್ನಡಿ ತೋರಿಸಿದ ನನ್ನ ಪ್ರತಿಬಿಂಬ ಪೂರ್ತಿ ಬದಲಾಗಿತ್ತು. ಬೆಳ್ಳಿ, ಬಂಗಾರ ಬಣ್ಣಗಳ ಹೊಳಪು, ರೇಶ್ಮೆಯನುಣುಪು ನನ್ನ ಮುಖ ಚಹರೆಯನ್ನೇ ಬದಲಾಯಿಸಿತ್ತು. ''ವ್ಹಾ ಹೇಗೆ ಕಾಣುತ್ತಿರುವೆ ನೋಡು'' ನಾನು ಉದ್ಗರಿಸಿದೆ.

ಆ ಹೆಂಗಸು ನನ್ನನ್ನು ಮೈಕ್‌ನ ಬಳಿ ಕರೆದೊಯ್ದಳು. ಅವನು ಸ್ಟೂಲ್ ಒಂದರ ಮೇಲೆ ನನ್ನನ್ನು ಕುಳ್ಳಿರಿಸಿದ. ಕ್ಯಾಮರಾ, ಲೈಟು, ಬ್ಯಾಟರಿ, ಹಾವಿನಂತೆ ತೂಗುಬಿದ್ದಿದ್ದ ವಾಯರುಗಳು ಅವನ್ನೆಂದೂ ಆ ಮೊದಲು ನಾನು ನೋಡಿರಲೇ ಇಲ್ಲ.

''ಸರಿ ವಾರಿಸ್, ತುಟಿಗಳೆರಡನ್ನೂ ಕೂಡಿಸು, ಎದುರಿಗೇ ದಿಟ್ಟಿಸು, ಗದ್ದ ಸ್ವಲ್ಪ ಮೇಲಕ್ಕಿರಲಿ... ಆ... ಹಾಗೆ, ತುಂಬಾ ಚೆನ್ನಾಗಿ ಕಾಣುವಿ...'' ಮೈಕ್ ಹೇಳುತ್ತಿರುವಂತೆ ಕ್ಲಿಕ್, ಕ್ಲಿಕ್... ಶಬ್ದ ಮಿಂಚಿನಂತೆ ಹೊಳೆದ ಬೆಳ್ಳಿ ಬೆಳಕು... ಎಲ್ಲವೂ ನಾನು ನಾನಲ್ಲವೇನೋ ಎಂಬ ಭಾವನೆ ಮೂಡಿಸಿದವು.

ಒಂದು ಚಿಕ್ಕ ಕಾಗದದ ಚೂರನ್ನು ಕ್ಯಾಮೆರಾದಿಂದ ಹೊರತೆಗೆದು ನನ್ನನ್ನು ನೋಡಲು ಬರುವಂತೆ ಸನ್ನೆ ಮಾಡಿದ ಮೈಕ್. ಆ ಕಾಗದದ ಮೇಲಿನ ತೆಳುಪೊರೆಯನ್ನು ಎಳೆದದ್ದೇ ತಡ... ಸುಂದರ ಹೆಣ್ಣಿನ ಮುಖವೊಂದು ಗೋಚರಿಸಿತು. ಮೈಕ್ ಮಾಂತ್ರಿಕನಂತೆ ಕಂಡ. ನನ್ನ ಕೈಗಿತ್ತ ಆ ಚಿತ್ರವನ್ನು ನೋಡಿ ಅದು ನಾನೇ ಎಂದು ಗುರುತಿಸದಾದೆ. ಗೋಡೆಯ ಮೇಲೆ ತೂಗುಹಾಕಿದ ಚಿತ್ರಗಳಲ್ಲಿನ ಮುಖಗಳಂತಿರುವ ನನ್ನ ಮುಖ ನೋಡಿ, ಅವರು ನನ್ನನ್ನು ರೂಪಾಂತರಿಸಿಬಿಟ್ಟಿದ್ದರು.

ವಾರಿಸ್ 'ಮೇಡ್' (ಕೆಲಸದಾಕೆ) ಹೋಗಿ ಈಗ ನಾನು ವಾರಿಸ್ ಮಾಡೆಲ್' (ರೂಪದರ್ಶಿ) ಆದೆ.

**ಶಸ್ತ್ರಚಿಕಿತ್ಸೆಗೆ ಆಹ್ವಾನ**

ತುಸು ದಿನಗಳ ತರುವಾಯ ಮಾಡೆಲಿಂಗ್ ಎಜೆನ್ಸಿಯಲ್ಲಿಯ ಮಹಿಳೆಯೊಬ್ಬಳು ನನ್ನ ಭಾವಚಿತ್ರ ನೋಡಿ ನನಗೊಂದು ಕೆಲಸದ ಆಹ್ವಾನ ಕಳಿಸಿದಳು. ಅವಳೇನು ಹೇಳಿದಳೋ ನನಗೊಂದೂ ತಿಳಿಯಲಿಲ್ಲ. ಆಕೆಯೇ ವಿಳಾಸವೊಂದನ್ನು ನೀಡಿ ಒಂದು ಟ್ಯಾಕ್ಸಿ ಗೊತ್ತು ಪಡಿಸಿ ನನ್ನನ್ನು ಕರೆ ಕಳಿಸಿದಳು.

ನಾನಲ್ಲಿ ತಲುಪಿದಾಗ ಆ ಸ್ಥಳವೆಲ್ಲ ವೃತ್ತಿಪರ ರೂಪದರ್ಶಿಗಳಿಂದ ಗಿಜಿಗುಡುತ್ತಿತ್ತು. ರೂಪದರ್ಶಿಗಳು ಒಳ್ಳೇ ಗತ್ತಿನಿಂದ ವೈಯ್ಯಾರಿಂದ ತಿರುಗಾಡುತ್ತಿದ್ದರು. ಅವರಲ್ಲಿಯೇ ಒಬ್ಬರಿಗೆ ನಾನು 'ಹಲೋ' ಎಂದೆ. 'ಎಂಥ ಕೆಲಸಗಳಿವೆ ಇಲ್ಲಿ' ಎಂದು ಕೇಳಿದೆ.

'ಪಿರೆಲ್ಲಿ ಕ್ಯಾಲೆಂಡರ್' ಉತ್ತರಿಸಿದವರು.

'ಮ್... ಧನ್ಯವಾದಗಳು... ಅದೇನು ಹಾಗೆಂದರೆ?' ನನ್ನ ಪ್ರಶ್ನೆಗೆ ಛಾಯಾಚಿತ್ರಗಾಹಕ ಟೆರೆನ್ಸ್ ಡೊನೋವನ್ ಚಹಾ ತಂದುಕೊಟ್ಟ ತನ್ನ ಕೆಲಸದ ಕುರಿತು ತಿಳಿಸಿ ಹೇಳಿ ಉತ್ತರಿಸಿದ. ಅಲ್ಲೇ ಮೇಜಿನ ಮೇಲಿದ್ದ ಕ್ಯಾಲೆಂಡರನ್ನು ತೆಗೆದುಕೊಂಡು ಅದರ ಹಾಳೆಗಳನ್ನು ತಿರುಗಿಸುತ್ತಾ ಹೋದ. ಒಂದೊಂದು ಹಾಳೆಯ ಮೇಲೂ ಅದ್ಭುತ ಸುಂದರಿಯರ ಚಿತ್ರಗಳಿದ್ದವು.

''ಇದು ಕಳೆದ ವರುಷದ ಪಿರೆಲ್ಲಿ ಕ್ಯಾಲೆಂಡರ್'' ಟೆರೆನ್ಸ್ ಹೇಳಿದ, ''ಈ ವರ್ಷ ಇದು ಸ್ವಲ್ಪ ಭಿನ್ನವಾಗಿರುತ್ತದೆ. ಬರೀ ಆಫ್ರಿಕದ ಹೆಂಗಸರ ಚಿತ್ರಗಳಿರುತ್ತವೆ. ಅದೂ ನಿನ್ನವು.''

ಅದರ ವಿಧಿ ವಿಧಾನಗಳೆಲ್ಲವನ್ನೂ ತಿಳಿಸಿದ. ನಾನದಕ್ಕೆ ಒಪ್ಪಿದೆ. ಕ್ಯಾಲೆಂಡರ್‌ಗೆ ರೂಪದರ್ಶಿಯಾಗಿ ನನ್ನ ವೃತ್ತಿಪರ ಕೆಲಸ ಪ್ರಾರಂಭವಾಯ್ತು. ಕೆಲಸ ಮುಗಿದ ನಂತರ ಕ್ಯಾಲೆಂಡರ ಮೇಲು ಹೊದಿಕೆಗೆ ನನ್ನ ಭಾವಚಿತ್ರಗಳಲ್ಲಿಯೇ ಒಂದನ್ನು ಆಯ್ಕೆ ಮಾಡಿ ಹಾಕುವುದಾಗಿ ಟೆರೆನ್ಸ್ ಹೇಳಿದ.

ರೂಪದರ್ಶಿಯಾಗಿ ನನ್ನ ಕೆಲಸ ದಿನದಿಂದ ದಿನಕ್ಕೆ ಉತ್ತಮಗೊಳ್ಳುತ್ತಾ ಹೋಯಿತು. ಪ್ಯಾರಿಸ್, ಮಿಲಾನ್, ನ್ಯೂಯಾರ್ಕ್ ನಗರಗಳಲ್ಲಿ ರೂಪದರ್ಶಿಯಾಗಿ ಕೆಲಸ ಮಾಡಿದೆ. ಅಲ್ಪ ಸಮಯದಲ್ಲೇ ಸಾಕಷ್ಟು ಹಣ ಗಳಿಸಿದೆ. ಆಫ್ರಿಕನ್ ಶೈಲಿಯ ಶ್ವೇತ ಉಡುಗೆಯಲ್ಲಿ ವಜ್ರಾಭರಣಗಳ ಜಾಹೀರಾತಿಗೆ ರೂಪದರ್ಶಿಯಾದೆ. ರೆವ್‌ಲಾನ್ ಕಂಪನಿಯ 'ಅಜೀ' ಎಂಬ ಸುಗಂಧದ್ರವ್ಯದ ಜಾಹೀರಾತು ನೀಡಿದೆ, 'ಆಫ್ರಿಕಾದ ಹೃದಯದಿಂದ ಬಂದ ಸುಗಂಧ ಪ್ರತಿ ಮಹಿಳೆಯ ಮನ ಸೂರೆಗೊಳ್ಳಲು ಬರುತ್ತಿದೆ' ಎಂಬ ಘೋಷಣೆಯೊಂದಿಗೆ.

ಸಿಂಡಿ ಕ್ರಾಫರ್ಡ್, ಕ್ಲಾಡಿಯಾ ಶಿಫ್ಫರ್, ಲಾರೆನ್ ಹಟ್ಟನ್ ಅವರೊಂದಿಗೆ ರೆವ್‌ಲಾನ್ ಜಾಹೀರಾತಿನಲ್ಲಿ ಕಾಣಿಸಿಕೊಂಡೆ. 'ಎಲ್ಲ ಗ್ಲಾಮರ್', 'ಇಟಾಲಿಯನ್ ವೋಗ್' 'ಬ್ರಿಟಿಷ್' ಹಾಗೂ 'ಅಮೇರಿಕನ್ ವೋಗ್'ದಂತಹ ಅಂತಾರಾಷ್ಟ್ರೀಯ ಫ್ಯಾಷನ್ ಪತ್ರಿಕೆಗಳಲ್ಲಿ ಕಾಣಿಸಿಕೊಂಡೆ.

ನವ ಜೀವನದ ಈ ಎಲ್ಲ ಉತ್ಸಾಹ, ಯಶಸ್ಸಿನೊಂದಿಗೆ ಹಳೆಯ ಗಾಯವೂ ತನ್ನ ಇರವನ್ನು ನೆನಪಿಸುತ್ತಿತ್ತು. ಸುನ್ನತಿಯ ನಂತರ ಜಿಪ್ಸಿ ಹೆಂಗಸು ಉಳಿಸಿದ ಚಿಕ್ಕದ್ವಾರದ ಮೂಲಕ ಮೂತ್ರ ಮಾಡುವುದು ಕಷ್ಟದಾಯಕವಾಗಿತ್ತು. ಹನಿಹನಿಯಾಗಿ ಮೂತ್ರ ವಿಸರ್ಜಿಸಬೇಕಿತ್ತು. ಒಂದು ಸಾರಿ ಮೂತ್ರ ವಿಸರ್ಜಿಸಲು ನನಗೆ ಕನಿಷ್ಠ ಹತ್ತು ನಿಮಿಷ ಬೇಕಾಗುತ್ತಿತ್ತು. ನನ್ನ ತಿಂಗಳ ಮುಟ್ಟಿನ ದಿನಗಳಂತೂ ದುಃಸ್ವಪ್ನಗಳಾಗಿದ್ದವು. ಪ್ರತಿ ತಿಂಗಳು ಈ ದಿನಗಳಲ್ಲಿ ನಾನು ಕೆಲಸ ಮಾಡುವುದು ಶಕ್ಯವಿರಲಿಲ್ಲ. ಸುಮ್ಮನೇ ಹಾಸಿಗೆಯಲ್ಲಿ ಬಿದ್ದುಕೊಂಡು ನಿತ್ಯ ನೋವಿನಿಂದ ಬಳಲುವದಕ್ಕಿಂತ ಸಾಯುವುದೇ ಮೇಲೆಂದು ಯೋಚಿಸುತ್ತಿದ್ದೆ. ಮೊಹಮ್ಮದ್ ಚಿಕ್ಕಪ್ಪನೊಡನೆ ಅವರ ಮನೆಯಲ್ಲಿರುವಾಗಲೇ ನೋವು ಉಲ್ಬಣಾವಸ್ಥೆ ತಲುಪಿತ್ತು. ಒಂದು ಬೆಳಿಗ್ಗೆ ಅಡಿಗೆಮನೆಯಿಂದ ಟ್ರೇ ಹಿಡಿದು ಬರುತ್ತಿರುವಾಗ ಊಟದ ಮೇಜಿನ ಹತ್ತಿರ ಒಮ್ಮಿಂದೊಮ್ಮೆಲೆ ಕಣ್ಣಿಗೆ ಕತ್ತಲೆ ಬಂದು ಬಿದ್ದುಬಿಟ್ಟೆ. ಚಿಕ್ಕಮ್ಮ ನನ್ನನ್ನು ಆಗಲೇ ಡಾಕ್ಟರ ಹತ್ತಿರ ಕರೆದೊಯ್ದರು. ನಾನು ಡಾಕ್ಟರಿಗೆ ನನ್ನ ಸುನ್ನತಿಯ ವಿಷಯ ಹೇಳದೇ ಮುಚ್ಚಿಟ್ಟೆ. ನನ್ನನ್ನು ಅವರು ವಿವರವಾಗಿ ಪರೀಕ್ಷಿಸಿದ್ದರಿಂದ ಅವರಿಗೆ ಏನೂ ತಿಳಿಯಲಿಲ್ಲ. ನೋವು ನಿವಾರಿಸಲು ನನಗೆ ಗರ್ಭನಿರೋಧಕ ಗುಳಿಗೆ ಕೊಟ್ಟರು.

ಆದರೆ ಅದರಿಂದ ನನಗೆ ಅಡ್ಡಪರಿಣಾಮಗಳುಂಟಾದವು. ತಿಂಗಳು ತಿಂಗಳು ನೋವು ಅನುಭವಿಸುವುದೇ ಮೇಲು ಎನಿಸಿ ಗುಳಿಗೆ ನಿಲ್ಲಿಸಿಬಿಟ್ಟೆ. ಮತ್ತೆ ನೋವು ಅತಿಯಾದಾಗ ಬೇರೆ ಡಾಕ್ಟರ್ ಹತ್ತಿರ ಹೋದೆ. ಅವರೂ ಅದೇ ತರಹದ ಗುಳಿಗೆ ಕೊಟ್ಟರು. ನಾನು ಈ ಬಾರಿ ಏನಾದರೂ ಮಾಡಲೇಬೇಕಿತ್ತು. ಚಿಕ್ಕಮ್ಮನಿಗೆ ನಾನು ಪರಿಣತ ವೈದ್ಯರನ್ನು ಕಾಣಬೇಕೆಂದು ಹೇಳಿದೆ. ನನ್ನ ಮಾತಿನ ಅರ್ಥ ತಿಳಿದ ಚಿಕ್ಕಮ್ಮ ಧೃಢವಾಗಿ ನಿರಾಕರಿಸಿ ''ಈ ವೈದ್ಯರೊಡನೆ ನೀನೇನು ಹೇಳುವಿ?'' ಎಂದ ಪ್ರಶ್ನಿಸಿದಳು.

ಏನೂ ಇಲ್ಲ, ನನಗೆ ಈ ನೋವಿನಿಂದ ಮುಕ್ತಿ ಪಡೆಯಬೇಕಿದೆ ಅಷ್ಟೇ. ಅವಳ ಮಾತಿನ ಸೂಕ್ಷ್ಮ ನನಗೆ ತಿಳಿದು ಹೇಳಿದೆ. ಸುನ್ನತಿ ಎಂಬುದು ಆಫ್ರಿಕದ ಸಂಪ್ರದಾಯವಾಗಿದ್ದು ಅದನ್ನು ಈ ಬಿಳಿಯ ವೈದ್ಯರೊಡನೆ ಚರ್ಚಿಸುವಂಥದಲ್ಲ ಎಂದು ಅವಳ ಅಭಿಪ್ರಾಯವಾಗಿತ್ತು.

ಕೊನೆಗೊಂದು ದಿನ ಡಾ. ಮೈಕೆಲ್ ಮ್ಯಾಕ್ರೇಸ್ ಅವರ ಹತ್ತಿರ ಹೋಗಿ ''ನೋಡಿ ಇಲ್ಲಿಯವರೆಗೆ ನಿಮಗೆ ಹೇಳಲಾರದ ರಹಸ್ಯವೊಂದಿದೆ, ನಾನು ಸೋಮಾಲಿಯಾದಿಂದ ಬಂದವಳು...''

ನನ್ನ ಮಾತಿನ್ನೂ ಪೂರ್ಣವಾಗಿರಲಿಲ್ಲ, ಡಾಕ್ಟರು, ''ಹೌದಾ... ನಡೆ ನಿನ್ನನ್ನು ಪರೀಕ್ಷಿಸುವೆ'' ಎಂದು ಉಡುಪು ಬದಲಿಸಲು ಪಕ್ಕದ ಕೊಠಡಿ ತೋರಿಸಿದರು. ನನ್ನ ಕಣ್ಣಲ್ಲಿಯ ಭಯ, ಆತಂಕ ಕಂಡು ನರ್ಸೊಬ್ಬಳನ್ನು ಕರೆದು ನನ್ನ ಉಡುಪು ಕಳಚಿ ಆಸ್ಪತ್ರೆಯ ಗೌನ್ ಧರಿಸಲು ಸಹಾಯ ಮಾಡಲು ಹೇಳಿದರು. ಹಾಗೇ 'ಆಸ್ಪತ್ರೆಯಲ್ಲಿ ಯಾರಾದರೂ ಸೋಮಾಲಿ ಭಾಷೆ ಮಾತನಾಡುವವರಿದ್ದರೆ ಕರೆದು ತಾ' ಎಂದರು. ನರ್ಸ್ ಒಬ್ಬ ಸೋಮಾಲಿ ಪುರುಷನೊಡನೆ ಮರಳಿ ಬಂದಳು. 'ಅಯ್ಯೋ ದುರ್ವಿಧಿಯೇ... ನನ್ನ ಸಮಸ್ಯೆ ಹೇಳಲು ದುಭಾಷಿಯನ್ನಾಗಿ ಸೋಮಾಲಿ ಗಂಡಸನ್ನೇ ಅವಲಂಬಿಸಬೇಕಾಯಿತಲ್ಲ' ಎಂದು ಪೇಚಾಡಿಕೊಂಡೆ. ಡಾ|| ಮೈಕೆಲ್ ಅವನಿಗೆ, 'ಇಷ್ಟು ದಿನ ಈಕೆ ಹೇಗೆ ಕಳೆದಿರುವಳೋ ದೇವರಿಗೆ ಗೊತ್ತು... ಈಗ ಅವಶ್ಯವಾಗಿ ತುರ್ತಾಗಿ, ಶಸ್ತ್ರಚಿಕಿತ್ಸೆ ಮಾಡಲೇಬೇಕು ಎಂದು ಅವಳಿಗೆ ತಿಳಿಸಿ ಹೇಳು' ಎಂದು ಸೂಚಿಸಿದರು.

ಈ ಮಾತಿನಿಂದ ಸೋಮಾಲಿ ಪುರುಷನಿಗೆ ಅಸಮಾಧಾನವಾದದ್ದು ನನಗೆ ಅರ್ಥವಾಯಿತು. ಡಾಕ್ಟರರನ್ನು ದುರುಗುಟ್ಟಿ ನೋಡಿ ಅವನು ನನಗೆ ''ನಿನಗೆ ಬೇಕಿದ್ದರೆ ಅವರು ಶಸ್ತ್ರಚಿಕಿತ್ಸೆ ಮಾಡುವರು. ಆದರೆ ಇದು ನಿನ್ನ ಸಂಪ್ರದಾಯಕ್ಕೆ ವಿರುದ್ಧವಾದುದು ಇದು ನಿನ್ನ ಕುಟುಂಬದವರಿಗೇನಾದರೂ ಗೊತ್ತಾ?'' ಎಂದು ಕೇಳಿದನು. 'ಇಲ್ಲ'ವೆಂದು ತಲೆಯಲುಗಿಸಿದೆ.

ಮುಂದೆ ನಾನು ಶಸ್ತ್ರಚಿಕಿತ್ಸೆಗೆ ಒಳಗಾಗಲು ಒಂದು ವರುಷವೇ ಬೇಕಾಯ್ತು. ನನ್ನ ವೈಯಕ್ತಿಕ ದ್ವಂದ್ವದಿಂದ ನಾನು ಹೊರಬರಬೇಕಿತ್ತು. ಡಾ. ಮೈಕೇಲ್ ಅವರು ''ನೀನೊಬ್ಬಳೇ ಅಲ್ಲ ನನ್ನ ಹತ್ತಿರ ಬಂದವಳು, ಸುಡಾನ್, ಈಜಿಪ್ತ, ಸೋಮಾಲಿಯಾದಿಂದ ಎಷ್ಟೋ ಮಹಿಳೆಯರು ನನ್ನ ಹತ್ತಿರ ಬಂದು ಈ ಸಮಸ್ಯೆ ಚರ್ಚಿಸಿದ್ದಾರೆ. ಗರ್ಭಿಣಿ ಸ್ತ್ರೀಯರು ಹೆದರಿ ತಮ್ಮ ಪತಿಯ ಪರವಾನಿಗೆ ಇಲ್ಲದೇ ನನ್ನ ಚಿಕಿತ್ಸೆ ಪಡೆದಿದ್ದಾರೆ. ನನ್ನ ಕೈಲಾದಷ್ಟು ಒಳ್ಳೆಯ ಚಿಕಿತ್ಸೆ ನೀಡಿರುವೆ'' ಎಂದರು. ಇದು ನನ್ನಲ್ಲಿ ಧೈರ್ಯ ತುಂಬಿತು. ನಾನು ಶಸ್ತ್ರಚಿಕಿತ್ಸೆಗೊಳಗಾದೆ. ಮೂರು ವಾರಗಳಲ್ಲೇ ಚೇತರಿಕೊಂಡೆ-ಪಾಯಖಾನೆಯ ಸೀಟ್ ಮೇಲೆ ಕೂಡಲು ಸಾಧ್ಯವಾಯ್ತು ಓಹ್! ಅದೆಂಥ ನಿರಮ್ಮಳ ಅನುಭವ, ವರ್ಣಿಸಲಸದಳ. ಅದಕ್ಕಾಗಿ ಯಾವತ್ತೂ ನಾನು ಡಾ. ಮೈಕೇಲ್ ಅವರಿಗೆ ಕೃತಜ್ಞತೆಗಳಾಗಿರುವೆನು.

### ಮರಳಿ ಸೋಮಾಲಿಯಾಕ್ಕೆ

1995ರಲ್ಲಿ ಬಿಬಿಸಿ 'ಸೂಪರ್ ಮಾಡೆಲ್' ಆದ ನನ್ನ ಜೀವನ ವೃತ್ತಾಂತವನ್ನು ಆಧರಿಸಿ ಒಂದು ಸಾಕ್ಷ್ಯಚಿತ್ರ ತೆಗೆಯಲು ಇಚ್ಛಿಸಿದರು. ಅದರ ನಿರ್ದೇಶಕರಾಗಿ ಜೆರ್ರಿ ಪೊಮೆರಾಯ್ ಅವರಿಗೆ ನಾನು, 'ಸೋಮಾಲಿಯಾಕ್ಕೆ ಮರಳಿ ಹೋಗಿ ತಾಯಿಯನ್ನು ಹುಡುಕುವ ನನ್ನ ಪ್ರಯತ್ನಕ್ಕೆ ಸಹಕರಿಸುವುದಾದರೆ ಚಿತ್ರ ತೆಗೆಯಲು ನನ್ನ ಅಭ್ಯಂತರವಿಲ್ಲ'' ಎಂದೆ.

ಆಸ್ಟ್ರೇಲಿಯಾದ ಬಿಬಿಸಿ ತಕ್ಷಣ ಹುಡುಕಾಟ ಆರಂಭಿಸಿತು. ನಕಾಶೆಯ ಸಹಾಯದಿಂದ ನನ್ನ ಕುಟುಂಬ ಎಲ್ಲೆಲ್ಲಿ ಹೊಲಸೆ

ಹೋಗುತ್ತಿತ್ತೆಂದು ತಿಳಿಸಲು ಪ್ರಯತ್ನಿಸಿದೆ. ನನ್ನ ಕುಟುಂಬದ ಆದಿವಾಸಿ ಜನಾಂಗದ ಹೆಸರಿನ ವಿವರವನ್ನೆಲ್ಲ ಹೇಳಬೇಕಾಯ್ತು.

ಮರುಭೂಮಿಯಲ್ಲಿ ಒಮ್ಮಿಂದೊಮ್ಮೆಲೆ ನೂರಾರು ತಾಯಂದಿರು ನನ್ನನ್ನು ತಮ್ಮ ಮಗಳೆಂದು ಹೇಳಿಕೊಳ್ಳತೊಡಗಿದರು. ಜೆರ್ರಿ ಒಂದು ಉಪಾಯ ಕಂಡುಹಿಡಿದ. ನಾನು ನನ್ನ ತಾಯಿ ಇಬ್ಬರೇ ತಿಳಿದಿರುವಂಥ ರಹಸ್ಯವೊಂದನ್ನು ಹೇಳುವಂತೆ ನನ್ನನ್ನು ಕೇಳಿದ.

''ಸರಿ... ನನ್ನ ತಾಯಿ ನನ್ನನ್ನು ಪ್ರೀತಿಯಿಂದ ಅವ್‌ಡೋಹಾಲ್ ಎನ್ನುತ್ತಿದ್ದಳು'' ನಾನೆಂದೆ.

''ಅವಳಿಗದು ನೆನಪಿರುತ್ತದಾ?'' ಜೆರ್ರಿ ಕೇಳಿದ.

''ಖಂಡಿತವಾಗಿ''

ಅಲ್ಲಿಂದಾಚೆಗೆ ಅವ್‌ಡೊಹಾಲ್ ಎಂಬುದು ರಹಸ್ಯ ಸಂಕೇತ ಶಬ್ದವಾಯಿತು. ಕೊನೆಗೊಂದು ದಿನ ಬಿಬಿಸಿ ಸಿಬ್ಬಂದಿ ಹೆಣ್ಣುಮಗಳೊಬ್ಬಳು, ತನಗೊಬ್ಬ ಮಗಳಿದ್ದಳು, ಅವಳ ಹೆಸರು ವಾರಿಸ್ ಎಂದಿತ್ತು. ಅವಳು ರಾಯಭಾರಿಯ ಮನೆಯಲ್ಲಿ ಇಂಗ್ಲೆಡಿನಲ್ಲಿ ಕೆಲಸ ಮಾಡುತ್ತಿದ್ದಳು. ಆದರೆ ಅವ್‌ಡೊಹಾಲ್ ಹೆಸರಿನ ಬಗ್ಗೆ ತನಗೆ ನೆನಪಿಲ್ಲ ಎನ್ನುತ್ತಿರುವಳು. ಬಹುಶಃ ಇವಳೇ ನನ್ನ ತಾಯಿ ಇದ್ದರೂ ಇರಬಹುದು'' ಎಂದು ಹೇಳಿದರು.

ಅವಳನ್ನು ಹುಡುಕಿಕೊಂಡು ಇಥಿಯೋಪಿಯಾದ ರಾಜಧಾನಿಯಾದ ಅಡಿಸ್ ಅಬಾಬ್‌ಗೆ ಹೋದೆವು. ಅಲ್ಲಿಂದ ಪುಟ್ಟ ವಿಮಾನವೊಂದರಲ್ಲಿ ಇಥಿಯೋಪಿಯಾ-ಸೋಮಾಲಿಯಾದ ಗಡಿಯ ನಡುವಿದ್ದ 'ಗಲಾದಿ' ಎಂಬ ಹಳ್ಳಿಗೆ ಹೋದೆವು. ಸೋಮಾಲಿ ನಿರಾಶ್ರಿತರು ತಾಯ್ನಾಡಿನಲ್ಲಿ ನಡೆದ ಹೋರಾಟದಿಂದ ಜೀವ ಉಳಿಸಿಕೊಳ್ಳಲು ಅಲ್ಲಿ ಬಂದು ನೆಲೆಸಿದ್ದರು.

'ಗಲಾದಿ'ಯಲ್ಲಿಳಿದಾಕ್ಷಣ ಅಲ್ಲಿನ ಬಿಸಿಗಾಳಿ ಹಾಗೂ ಮರಳಿನ ಸುಗಂಧದಿಂದ ನನಗೆ ನನ್ನ ಕಳೆದುಹೋದ ಬಾಲ್ಯದ ನೆನಪು ಮರುಕಳಿಸಿತು. ಉಕ್ಕಿಬಂದ ಭಾವನೆಗಳ ಓಘಕ್ಕೆ ಸಿಕ್ಕು ನಾನು ಮರಳಿನ ಮೇಲೆ ಓಡತೊಡಗಿದೆ. ನನ್ನ ನೆಲವನ್ನು ಪ್ರೀತಿಯಿಂದ ಸ್ಪರ್ಷಿಸಿ ಬೊಗಸೆ ತುಂಬ ಮಣ್ಣು ತುಂಬಿಕೊಂಡು ಆಘ್ರಾಣಿಸಿದೆ. ಗಿಡಮರಗಳನ್ನು ಮುಟ್ಟಿ ತಟ್ಟಿ ನೋಡಿದೆ. ಅವು ಧೂಳಿನ ಸ್ನಾನ ಮಾಡಿದ್ದವು. ನನಗೆ ಗೊತ್ತಿತ್ತು. ಕೆಲವೇ ದಿನಗಳಲ್ಲಿ ಮಳೆಗಾಲ ಪ್ರಾರಂಭವಾಗಲಿದೆ ಹಾಗೂ ಮರಳುಗಾಡಿನಲ್ಲಿ ಹಸಿರುಕ್ಕಲಿದೆ, ಹೂವರಳಲಿದೆ ಎಂದು.

ಅವರು ಸುಳಿವು ನೀಡಿದ ಮಹಿಳೆ 'ಅಮ್ಮ'ನಾಗಿರಲಿಲ್ಲ. ಆ ಹಳ್ಳಿಯಲ್ಲಿ ಸುತ್ತಾಡುತ್ತಾ ಪ್ರತಿಯೊಬ್ಬರನ್ನೂ ನನ್ನ ಕುಟುಂಬದ ಬಗ್ಗೆ ವಿಚಾರಿಸತೊಡಗಿದೆವು. ವೃದ್ಧನೊಬ್ಬ ನನ್ನೆಡೆಗೆ ನಡೆದುಬಂದು 'ನನ್ನ ನೆನಪಿದೆಯಾ?' ಎಂದು ಕೇಳಿದ.

'ಇಲ್ಲ' ನಾನೆಂದೆ. 'ನಾನು ಇಸ್ಮೈಲ್ ನಿನ್ನ ತಂದೆಯ ಸ್ನೇಹಿತ' ಎಂದು ಅವನು ಹೇಳುತ್ತಲೇ ಅವನ ನೆನಪು ಬಂದು ಅವನನ್ನು ಮರೆತದ್ದಕ್ಕಾಗಿ ನನ್ನ ಕುರಿತು ನನಗೇ ನಾಚಿಕೆಯಾಯಿತು. ತುಂಬಾ ದಿನಗಳಾಗಿದ್ದರಿಂದ ಗುರುತು ಹಿಡಿಯಲಾಗಲಿಲ್ಲವೆಂದು ಕ್ಷಮೆ ಕೇಳಿದೆ. 'ನಿನ್ನ ತಾಯಿ ಎಲ್ಲಿರುವಳು, ನಿನ್ನ ಕುಟುಂಬ ಎಲ್ಲಿದೆ ಎಂದು ನಾನು ಹುಡುಕಬಲ್ಲೆ. ಆದರೆ ನನಗೆ ಪೆಟ್ರೋಲಿಗೆ ಹಣಬೇಕು' ಎಂದ ಆ ವೃದ್ಧ.

ಬಿಬಿಸಿ ಸಿಬ್ಬಂದಿ ಅದಕ್ಕೊಪ್ಪಿ ಅವನಿಗೆ ತುಸು ಹಣ ನೀಡಿದರು. ಅವನು ತನ್ನ ಟ್ರಕ್ಕಿನಲ್ಲಿ ಹಾರಿ ಕುಳಿತವನೇ ಧೂಳಿನ ಮೋಡವೆಬ್ಬಿಸಿ ಅಲ್ಲಿಂದ ಹೊರಟುಹೋದ. ಮೂರುದಿನ ಕಳೆದರೂ ಅಮ್ಮನ ಯಾವ ಸುಳಿವೂ ಸಿಗಲಿಲ್ಲ. ಜೆರ್ರಿ ತುಂಬ ಕಾತರನಾಗಿದ್ದ. ''ನಾನು ಆಣೆ ಮಾಡಿ ಹೇಳುವೆ ನಾಳೆ ಸಂಜೆ ಆರುಗಂಟೆಯ ಒಳಗಾಗಿ ನನ್ನ ತಾಯಿ ಇಲ್ಲಿರುವಳು'' ನಾನು ಅವನಿಗೆಂದೆ. ಅದ್ಯಾಕೋ ನನಗೆ ಅಂಥಾ ನಂಬಿಕೆ ಹುಟ್ಟಿಬಿಟ್ಟಿತು.

ಮಾರನೆಯ ದಿನ ಸಂಜೆ ಆರಕ್ಕೆ ಹತ್ತು ನಿಮಿಷವಿರುವಾಗಲೇ ಜೆರ್ರಿ 'ಆ ಮನುಷ್ಯ ಒಬ್ಬ ಹೆಣ್ಣುಮಗಳನ್ನು ಕರೆತಂದಿದ್ದಾನೆ, ನೀನು ನಂಬು, ಬಿಡು ಅವಳೇ ನಿನ್ನ ತಾಯಿಯಂತೆ' ಎಂದು ಹೇಳಿದ.

ಇಸ್ಮೈಲ್‌ನ ವಾಹನ ಎದುರಿಗೇ ನಿಂತಿತ್ತು. ಮಹಿಳೆಯೊಬ್ಬಳು ಅದರಿಂದ ಇಳಿಯುತ್ತಿದ್ದಳು. ನನಗೆ ಅವಳ ಮುಖ ಕಾಣುತ್ತಿರಲಿಲ್ಲ. ಆದರೆ ಅವಳ ಕುತ್ತಿಗೆಯ ಸುತ್ತ ವಸ್ತ್ರ ಸುತ್ತಿದ ರೀತಿಯಿಂದಲೇ ಅವಳು ನನ್ನ ತಾಯಿಯೆಂದು ಖಂಡಿತವಾಯ್ತು.

### ಪುನರ್ಮಿಲನ

'ಓಹ್ ಅಮ್ಮಾ...' ಎಂದು ನಾನು ಓಡಿ ಹೋಗಿ ಅವಳಿಗೆ ತೆಕ್ಕೆ ಬಿದ್ದೆ. ಅದೂ ಇದೂ ಕ್ಷೇಮ ಸಮಾಚಾರ ಮಾತಾಡಿದ ನಂತರ ಅವಳನ್ನು ಭೇಟಿಯಾದ ಸಂತಸವೆಲ್ಲ ಹಾರಿಹೋಯ್ತು. ಅಮ್ಮ ಇಸ್ಮೈಲ್‌ನೊಡನೆ ಬರುವ ಸಮಯದಲ್ಲಿ ಅಪ್ಪ ನೀರು ಹುಡುಕಿಕೊಂಡು ಹೋಗಿದ್ದನಂತೆ. ಅವನಿಗೆ ವಯಸ್ಸಾಗಿತ್ತು. ಮಳೆಮೋಡಗಳನ್ನು ಹುಡುಕಿಕೊಂಡು ಇಡೀ ದಿನ ಅಲೆದಾಡುತ್ತಿದ್ದನಂತೆ. ಅವನ ಕಣ್ಣಿನ ದೃಷ್ಟಿಯೂ ಮಂದವಾಗುತ್ತ ಬಂದಿದೆಯಂತೆ ಎಂದು ಅಮ್ಮ ಹೇಳಿದಳು. ನನ್ನ ತಮ್ಮ ಆಲಿಯೂ ಅಲ್ಲಿದ್ದ. ಅವನನ್ನು ನಾನು ತಬ್ಬಿಕೊಂಡಾಗ, 'ಬಿಡು ನಾನೇನು ಚಿಕ್ಕಮಗುವಲ್ಲ, ನನಗೆ ಮದುವೆ ವಯಸ್ಸಾಗಿದೆ' ಎಂದು ಕೊಸರಿಕೊಂಡ. 'ಹೌದೇ ಎಷ್ಟು ವಯಸ್ಸು?' ಎಂದು ಕೇಳಿದಾಗ 'ಗೊತ್ತಿಲ್ಲ ಆದರೂ ಮದುವೆಯ ವಯಸ್ಸಾಗಿದೆ' ಎಂದ.

'ಗಲಾದಿ' ಹಳ್ಳಿಯ ಮನೆಯೊಂದರ ಒಳಗೆ ಅಮ್ಮ ಮಲಗಿದ್ದಳು. ಹೊರಗೆ ನನ್ನ ತಮ್ಮನೊಡನೆ ನಾನು ಮಲಗಿದ್ದೆ. ಬಹುದಿನಗಳ ನಂತರ ನಕ್ಷತ್ರಗಳಡಿ ಮಲಗಿ ಆ ರಾತ್ರಿ ಮತ್ತೆ ಶಾಂತಿ ಸಂತಸಗಳನ್ನನುಭವಿಸಿದೆ.

''ನೀನೇಕೆ ಮದುವೆಯಾಗಿಲ್ಲ?'' ಅಮ್ಮ ಕೇಳಿದಳು. ''ಯಾಕೆ ನಾನು ಸ್ವತಂತ್ರವಾಗಿರುವುದು ನಿನಗೆ ಬೇಡವೇ?'' ನಾನು ಪ್ರಶ್ನಿಸಿದೆ. ''ನನಗಂತೂ ಮೊಮ್ಮಕ್ಕಳು ಬೇಕು'' ಅಮ್ಮ ಉತ್ತರಿಸಿದಳು.

ಜೆರ್ರಿ ಅಮ್ಮನೊಡನೆ ನನ್ನ ಹಲವಾರು ಫೋಟೋ ತೆಗೆದನು. ಅಮ್ಮ ಅದನ್ನು ಸ್ವಲ್ಪವೂ ಇಷ್ಟಪಡಲಿಲ್ಲ.

ಮರುಬೆಳಿಗ್ಗೆ ವಿಮಾನ ನಮ್ಮನ್ನು ಕರೆದೊಯ್ಯಲು ಬಂದಾಗ ನನ್ನೊಡನೆ ಬಂದು ಇಂಗ್ಲೆಂಡಿನಲ್ಲಿಯೇ ಇರಬಾರದೇಕೆಂದು ಅಮ್ಮನನ್ನು ಒತ್ತಾಯಿಸಿದೆ. ಅದು ಸಾಧ್ಯವಾಗದು. ಅಪ್ಪನಿಗೆ ಈಗ ತನ್ನ ಅವಶ್ಯಕತೆಯಿದೆ. ಅಲ್ಲದೆ ತನಗೆ ಸುಮ್ಮನೆ ಕೂಡುವುದಾಗುವುದಿಲ್ಲ ಎಂದಳು. ಸೋಮಾಲಿಯಲ್ಲಿ ತನಗೆ ಇರಲು ಒಂದು ನೆಲ ಒದಗಿಸಿಕೊಡಲು ಕೇಳಿದಳು. ''ಇದು ನನ್ನ ನೆಲ - ಇದನ್ನು ಬಿಟ್ಟಿರಲಾರೆ'' ಎಂದಳು.

ಗಟ್ಟಿಯಾಗಿ ಅಮ್ಮನನ್ನು ತಬ್ಬಿಕೊಂಡು ಅವಳಿಂದ ಬೀಳ್ಕೊಂಡೆ. 'ಮತ್ತೆ ಬರುವೆ ಅಮ್ಮ ಮರೆಯದಿರು' ಎಂದು ಕೈಬೀಸಿದೆ.

### ನನ್ನ ಧ್ಯೇಯ

ನನ್ನ ವೃತ್ತಿಜೀವನದ ಔನ್ನತ್ಯ ತಲುಪಿದ ನಾನು ಜಾಹಿರಾತು. ಮ್ಯೂಸಿಕ್ ವಿಡಿಯೋಗಳಲ್ಲಿ ಕಾಣಿಸಿಕೊಳ್ಳತೊಡಗಿದೆ. ಹೆಸರಾಂತ ಫೋಟೋಗ್ರಾಫರ್‌ರೊಂದಿಗೆ ಫ್ಯಾಷನ್ ವ್ಯವಹಾರಕ್ಕೆ ಸಂಬಂಧಿಸಿದಂತೆ ಕೆಲಸ ಮಾಡಹತ್ತಿದೆ. ಸ್ವರ್ಗ ಸಮಾನವಾಗಿತ್ತು ನನ್ನ ಜೀವನ.

ಮದುವೆಯಾಗಲು ನನಗಿನ್ನೂ ಒಳ್ಳೇ ಸಂಗಾತಿ ದೊರೆತಿಲ್ಲವೆಂದು ಅಮ್ಮನಿಗೆ ಹೇಳಿದ್ದೆ. ಆದರೆ ನ್ಯೂಯಾರ್ಕಿನಲ್ಲಿ 1995ರ ಶಿಶಿರ ಋತುವಿನ ಒಂದು ರಾತ್ರಿ ಚಿಕ್ಕ ಜಾಝುಕ್ಲಬ್‌ವೊಂದರಲ್ಲಿ ಡ್ರಮ್ಮರನಾಗಿದ್ದ ಡಾನಾಮುರ್ರೇಯನನ್ನು ಕಂಡಾಕ್ಷಣ ಅವನೇ ನನಗೆ ಸರಿಯಾದ ಸಂಗಾತಿಯೆಂದು ತೀರ್ಮಾನಿಸಿದೆ.

ರಾತ್ರಿಯೂಟದ ಸಮಯದಲ್ಲಿ ಅವನೆಡೆ ನೋಡಿ ನಕ್ಕು 'ನಾನೊಂದು ದಿನ ನಿನ್ನ ಮಗುವಿನ ತಾಯಿಯಾಗುವೆ' ಎಂದೆ. ಪ್ರಥಮಬಾರಿಗೆ ನನಗೆ ಸಂಗಾತಿಯೊಬ್ಬ ಬೇಕೆನಿಸಿತು. ನಾವಿಬ್ಬರೂ ಭಾವೀಜೀವನ ಜೊತೆಯಾಗಿ ಸಾಗಿಸಲು ನಿರ್ಧರಿಸಿದೆವು. 1995ರಲ್ಲಿ ನಾನು ಮುರ್ರೇನಿಗೆ ಹೇಳಿದ ಭವಿಷ್ಯ ಸತ್ಯವಾಯ್ತು. ಜೂನ್ 13, 1997ರಂದು ಬೀಸು ಕೈಕಾಲುಗಳ, ರೇಷ್ಮೆ ಕೂದಲಿನ ಸುಂದರ ಮಗನ ತಾಯಾದೆ. ಅವನನ್ನು 'ಅಲಿಕ್' ಎಂದು ಕರೆದೆ. ಪುಟ್ಟಬಾಯಿ, ತುಂಬುಗೆನ್ನೆಯ ಮೇಲೆ ಬೀಳುವ ಗುಳಿಯಿಂದ ಅವನು ಪುಟ್ಟ ಕಪ್ಪು ಕಾಮಧೇನುವಿನಂತಿರುವನು. ಅಲಿಕ್ ನನ್ನ ಮಡಿಲು ತುಂಬಿದಂದಿನಿಂದ ನನ್ನ ಜೀವನಗತಿ ಬದಲಾಯ್ತು. ಅವನ ಆಟೋಟಗಳಿಂದ ಸಿಗುವ ಸಂತಸಕ್ಕೆ ಎಣೆಯೇ ಇಲ್ಲ. ಜೀವನ ನನಗೆ ಕರುಣಿಸಿದ ಅಮೂಲ್ಯ ಕೊಡುಗೆ ನನ್ನ ಪುಟ್ಟ ಕಂದ.

ಐದು ವರುಷದವಳಿದ್ದಾಗ ಸುನ್ನತಿಯೊಂದಿಗೆ ಪ್ರಾರಂಭವಾದ ನನ್ನ ಹೆಂಗಸಾಗುವ ಪ್ರಕ್ರಿಯೆ ಮಗುವಿನ ತಾಯಿಯಾಗುವುದರೊಂದಿಗೆ ಪೂರ್ಣಗೊಂಡಿತು. ನನಗೀಗ ಮೂವತ್ತು ವರ್ಷ. ಈಗಲೂ ನನಗೆ ನನ್ನ ತಾಯಿಯ ಕುರಿತು ಅಪಾರ ಗೌರವವಿದೆ. ಸೋಮಾಲಿಯಾದ ಹೆಂಗಸರು ಎಂಥ ಅಪ್ರತಿಮ ಶಕ್ತಿಯನ್ನು ಹೊಂದಿರುವರೆಂಬುದನ್ನು ಮನಗಂಡಿದ್ದೇನೆ.

ಸ್ತ್ರೀಸುನ್ನತಿ ಎಂಬ ಕ್ರೂರ ಸಂಪ್ರದಾಯಕ್ಕೆ ಬಲಿಯಾದ ಆಫ್ರಿಕಾದ ಎಷ್ಟೋ ಹೆಣ್ಣುಮಕ್ಕಳು ಜೀವಮಾನವೆಲ್ಲ ನೋವಿನಲ್ಲಿ ಕಳೆಯುವರು. ಆ ಪುಟ್ಟ ಹೆಣ್ಣು ಮಕ್ಕಳ ಪರವಾಗಿ ಯಾರಾದರೂ ಮಾತಾಡಲೇಬೇಕು. ಅವರಂತೆಯೇ ಅಲೆಮಾರಿಯಾಗಿದ್ದ ನೋವು ಅನುಭವಿಸಿದ ನಾನೇ ಅವರಿಗೆ ಸಹಾಯ ಮಾಡಬೇಕೆಂದುಕೊಂಡೆ.

ನಾನು ಸ್ತ್ರೀಸುನ್ನತಿಯ ಕುರಿತು ಹೆಚ್ಚು ಹೆಚ್ಚು ಸಂದರ್ಶನ ನೀಡತೊಡಗಿದೆ. ಶಾಲೆ, ಸಂಘಸಂಸ್ಥೆ ಎಲ್ಲೆಡೆ ಹೋಗಿ ಈ ವಿಷಯ ಪ್ರಸ್ತಾಪಿಸತೊಡಗಿದೆ.

1997ರಲ್ಲಿ ವಿಶ್ವಸಂಸ್ಥೆಯ 'ಜನಸಂಖ್ಯಾ ನಿಧಿ' ಸಂಘ, ಸ್ತ್ರೀಸುನ್ನತಿಯ ವಿರುದ್ಧ ಹೋರಾಡಲು ನನ್ನನ್ನು ಆಹ್ವಾನಿಸಿತು. ಸ್ತ್ರೀಸುನ್ನತಿಯನ್ನು FGM (Female Gential Mutilisation) ಅದು ಎನ್ನುತ್ತದೆ. WHO (ವಿಶ್ವ ಆರೋಗ್ಯ ಸಂಸ್ಥೆ) FGM ಕುರಿತು ಆಘಾತಕರ ವಿವರಗಳನ್ನೂ ಅಂಕಿಅಂಶಗಳನ್ನೂ ಕೊಡುವುದರ ಮೂಲಕ ಈ ಸಮಸ್ಯೆ ಹೇಗೆ ಆಳವಾಗಿ ಬೇರೂರಿದೆ ಎಂದು ತಿಳಿಸಿದೆ.

ಸ್ತ್ರೀಸುನ್ನತಿಯನ್ನು ಪ್ರಮುಖವಾಗಿ ಆಫ್ರಿಕಾದ 28 ದೇಶಗಳಲ್ಲಿ ಆಚರಿಸಲಾಗುತ್ತಿದೆ. ಆಫ್ರಿಕಾದಿಂದ ವಲಸೆ ಹೋಗಿ ಅಮೇರಿಕಾ, ಯುರೋಪುಗಳಲ್ಲಿ ನೆಲೆಸಿರುವ ಆಫ್ರಿಕನ್ ಜನಾಂಗದವರಲ್ಲಿಯೂ ಇದು ಆಚರಣೆಯಲ್ಲಿದೆ. 130 ಮಿಲಿಯ ಹುಡುಗಿಯರು/ಹೆಂಗಸರು ಈ ಆಚರಣೆಗೆ ಬಲಿಯಾಗುವ ಅಪಾಯದಲ್ಲಿರುವರು. ಅಂದರೆ ಸರಿಸುಮಾರು 6000 ಹುಡುಗಿಯರು ಪ್ರತಿನಿತ್ಯ ಈ ಕ್ರೂರ ಆಚರಣೆಗೊಳಗಾಗುತ್ತಿರುವರು.

ಇತ್ತೀಚಿನ ದಿನಗಳಲ್ಲಿ ನಾನು ವಿಶ್ವಸಂಸ್ಥೆಯ 'ಜನಸಂಖ್ಯಾ ನಿಧಿ'ಯ ರಾಯಭಾರಿಯಾಗಿ ಈ ಆಚರಣೆಯ ವಿರುದ್ಧ ಹೋರಾಡುತ್ತಿರುವುದು ನನಗೆ ಹೆಮ್ಮೆಯ ಸಂಗತಿಯಾಗಿದೆ. ಆಫ್ರಿಕಾಕ್ಕೆ ಮರಳಿ ಈ ವಿರುದ್ಧ ಗಟ್ಟಿ ದನಿಯೆತ್ತುವ ನಿರ್ಧಾರ ಮಾಡಿರುವೆ.

ಮೂಲ : ವಾರಿಸ್ ಡೇರಿ

★

## ನಿಮಗಿದು ತಿಳಿದಿರಲಿ

## "ಸುರಕ್ಷ ಹೆರಿಗೆ ಯೋಜನೆ"

## ಗ್ರಾಮೀಣ ಪ್ರದೇಶಗಳ ಗರ್ಭಿಣಿ ಮಹಿಳೆಯರಿಗೆ ರಕ್ಷಾ ಕವಚ

ಗ್ರಾಮೀಣ ಪ್ರದೇಶದ ಮಹಿಳೆಯರ ಸುರಕ್ಷಿತ ತಾಯ್ತನ ಮತ್ತು ಶಿಶು ಆರೋಗ್ಯವನ್ನು ಗಮನದಲ್ಲಿಟ್ಟುಕೊಂಡು ಕರ್ನಾಟಕ ಸರ್ಕಾರ ರೂಪಿಸಿದ ಉದಾತ್ತ ಯೋಜನೆಯಿದು.

ಹೆರಿಗೆಯ ಪೂರ್ವದಲ್ಲಿ ಮತ್ತು ಹೆರಿಗೆ ನಂತರವೂ ಈ ಯೋಜನೆಯ ಸೌಲಭ್ಯ ಒದಗಿಸುವ ಮೂಲಕ ತಾಯಿಯ ಆರೋಗ್ಯ ಕಾಪಾಡಿ ತಾಯಿಯ ಮರಣವನ್ನು ಮತ್ತು ಶಿಶು ಮರಣವನ್ನು ತಪ್ಪಿಸುವುದು ಯೋಜನೆಯ ಮುಖ್ಯ ಗುರಿ.

**ನೆನಪಿಡಿ :**

- ಹೆರಿಗೆಯನ್ನು ತರಬೇತಿ ಪಡೆದವರಿಂದ ಶುಚಿಯಾದ ಸ್ಥಳದಲ್ಲಿಯೇ ಮಾಡಿಸಬೇಕು. ಇದು ತಾಯಿಯ ಹಾಗೂ ಮಗುವಿನ ಆರೋಗ್ಯಕ್ಕೆ ಅತ್ಯಂತ ಮುಖ್ಯವಾದದು.
- ಹೆರಿಗೆ ನಂತರ ತಾಯಿ ಮತ್ತು ಮಗುವಿನ ಆರೋಗ್ಯದ ಕಡೆ ಸಾಕಷ್ಟು ಗಮನ ನೀಡಬೇಕು
- ಬಾಣಂತಿಯರಿಗೆ ಸಾಕಷ್ಟು ಪೌಷ್ಟಿಕ ಆಹಾರ ನೀಡಬೇಕು.
- ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು ನಿಮ್ಮ ಮನೆಗಳಿಗೆ ಕಾಲ ಕಾಲಕ್ಕೆ ಭೇಟಿ ನೀಡಿ ನಿಮ್ಮ ಆರೋಗ್ಯ ವಿಚಾರಿಸಿ ಅಗತ್ಯ ಸಲಹೆ ನೀಡುವರು.
- ಪ್ರಾಥಮಿಕ ಆರೋಗ್ಯ ಕೇಂದ್ರ, ಉಪ ಕೇಂದ್ರಗಳಲ್ಲಿ ವೈದ್ಯರು, ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು ನಿಮಗೆ ನಿಗದಿತವಾಗಿ ಅಗತ್ಯವಾದ ಸಲಹೆ, ಸೂಚನೆ ಮತ್ತು ಸಹಕಾರವನ್ನು ನೀಡುವರು.

### ಮನೆಯಲ್ಲಿ ಹೆರಿಗೆ ಮಾಡಿಸಿಕೊಳ್ಳುವವರಿಗೆ ಸುರಕ್ಷ ಪೊಟ್ಟಣದ ಸೌಲಭ್ಯ

### ಪೊಟ್ಟಣದಲ್ಲಿರುವ ಸಾಮಗ್ರಿಗಳು

ಸಂಸ್ಕರಿಸಿದ ಹೊಸಬ್ಲೇಡ್, ಸಂಸ್ಕರಿಸಿದ ತೆಳುವಾದ ಜಾಲರಿ ಬಟ್ಟೆ, ಸಂಸ್ಕರಿಸಿದ ಹೊಕ್ಕಳ ಬಳ್ಳಿ ಕಟ್ಟುವ ದಾರ, ಸಂಸ್ಕರಿಸಿದ ಗ್ಲೌಸ್ ಒಂದು ಜೊತೆ, ಸಂಸ್ಕರಿಸಿದ ಪ್ಯಾಡ್, ಸಂಸ್ಕರಿಸಿದ ಹೊಕ್ಕಳ ಬಳ್ಳಿ ಕ್ಲಾಂಪ್, ಸೋಪು, ಪ್ಲಾಸ್ಟರ್, ಆಂಟಿ ಸೆಪ್ಟಿಕ್ ಲೋಶನ್ ಮತ್ತು ಟವಲ್.

ಈ ಬಗ್ಗೆ ಅಗತ್ಯ ಮಾಹಿತಿ ಮತ್ತು ಸೌಲಭ್ಯಗಳಿಗೆ ನಿಮ್ಮ ಹತ್ತಿರದಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರ ಉಪ ಕೇಂದ್ರದಲ್ಲಿರುವ ಮಹಿಳಾ ಆರೋಗ್ಯ ಸಹಾಯಕರನ್ನು ಸಂಪರ್ಕಿಸಿರಿ.

---

### ತಾಯಿಯ ಎದೆ ಹಾಲು ಮಗುವಿಗೆ ಸರ್ವೋತ್ತಮ ಆಹಾರ

---

**ಕರ್ನಾಟಕ ವಾರ್ತೆ**

# ಹಸಿವಿನ ವಿರುದ್ಧ

ಈ ಬಾರಿಯ ಏಪ್ರಿಲ್ 24 ಒಂದು ಚರಿತ್ರಾರ್ಹವಾದ ದಿನ. ಸಂವಿಧಾನದ 73 ಮತ್ತು 74ನೇ ವಿಧಿಯ ತಿದ್ದುಪಡಿಯಿಂದಾಗಿ ಸಹಸ್ರಾರು ಮಹಿಳೆಯರು ಸ್ಥಳೀಯ ನೆಲೆಯಲ್ಲಿ ಸಕ್ರಿಯವಾಗಿ ರಾಜಕೀಯದಲ್ಲಿ ಪಾಲ್ಗೊಳ್ಳಲು ಸಾಧ್ಯವಾದ ದಿನದ ದಶಮಾನೋತ್ಸವದ ದಿನ. ಅಂದು ಅಖಿಲಭಾರತ ಜನವಾದಿ ಮಹಿಳಾ ಸಂಘಟನೆಯು ನವದೆಹಲಿಯಲ್ಲಿ ಹೊಸ ಆಹಾರನೀತಿಯನ್ನು ರೂಪಿಸುವ ಸಲುವಾಗಿ ರಾಷ್ಟ್ರೀಯ ಮಹಿಳಾ ಸಮಾವೇಶವನ್ನು ನಡೆಸಿತು. ಈ ಸಮಾವೇಶದ ಮುಖ್ಯ ಉದ್ದೇಶ. ಉದಾರೀಕರಣದ ನೀತಿಯ ಮೂಲಕ ದುಡಿಯುವ ವರ್ಗದ ಮೇಲೆ ನಡೆಯುತ್ತಿರುವ ದಬ್ಬಾಳಿಕೆಯನ್ನು ವಿರೋಧಿಸುವ ಎಲ್ಲ ವರ್ಗದ ಹೋರಾಟದೊಂದಿಗೆ ಸೇರಿಕೊಂಡು ಹೊಸ ಆಹಾರನೀತಿ, ಕಡಿಮೆ ಬೆಳೆಗೆ ಆಹಾರ ಮತ್ತು ದುಡಿಯಲು ಉದ್ಯೋಗ ದೊರಕಿಸುವ ಪ್ರಯತ್ನಗಳನ್ನು ರೂಪಿಸುವುದೇ ಆಗಿತ್ತು.

ಇಂದಿನ ಸರ್ಕಾರದ ಆಹಾರನೀತಿಯು ವಿಶ್ವ ವಾಣಿಜ್ಯ ಸಂಸ್ಥೆ ವಿಶ್ವಬ್ಯಾಂಕು ಮತ್ತು ಜಾಗತಿಕ ಹಣಕಾಸು ಸಂಸ್ಥೆಯ ನಿರ್ದೇಶನದಂತೆ ನಡೆಯುತ್ತಿದೆ. ಅದು ಆರ್ಥಿಕವಾಗಿ ದುರುದ್ದೇಶದಿಂದ ಕೂಡಿದ್ದು, ನೈತಿಕವಾಗಿ ದಿವಾಳಿತನದ ಲಕ್ಷಣಗಳನ್ನು ತೋರಿಸುತ್ತಿದೆ. ಈಗ ಚಾಲ್ತಿಯಲ್ಲಿರುವ ಸಾರ್ವಜನಿಕ ಆಹಾರ ವಿತರಣಾ ಪದ್ಧತಿಯನ್ನು ಸಂಪೂರ್ಣವಾಗಿ ಕೆಡವಿ ಆಹಾರದ ಭದ್ರತೆಯನ್ನು ನಾಶಮಾಡಿ ಲಾಭಗಳಿಕೆಯ ಉದ್ದೇಶವೇ ಮುಖ್ಯವಾಗಿರುವ ಮುಕ್ತ ಮಾರುಕಟ್ಟೆಗೆ ಬಾಗಿಲು ತೆರೆಯುವ ಉದ್ದೇಶದಿಂದ ಕೂಡಿದೆ. ಸರ್ಕಾರವು 6 ಕೋಟಿ ಟನ್ ಆಹಾರ ಧಾನ್ಯಗಳನ್ನು ಗೋಡೌನ್‌ಗಳಲ್ಲಿ ಕೊಳೆಯುವಂತೆ ಮಾಡಿದೆ. ಇಲಿಗಳು ಆಹಾರ ತಿಂದರೂ ಪರವಾಗಿಲ್ಲ, ಆದರೆ ಬಡವರಿಗೆ ಕಡಿಮೆ ಬೆಲೆಯಲ್ಲಿ ಆಹಾರ ಹಂಚುವ ಮನಸ್ಸಿಲ್ಲ. ನೊಂದ ಗಾಯಕ್ಕೆ ಬರೆ ಹಚ್ಚುವಂತೆ ವಾಜಪೇಯಿ ಸರ್ಕಾರವು 9.6 ಮಿಲಿಯನ್ ಆಹಾರಧಾನ್ಯವನ್ನು ಕೇವಲ 4 ರೂಪಾಯಿಗಳಿಗೆ ಆಮದು ಮಾಡಿದೆ. ಅಂದರೆ ಬಡಭಾರತೀಯನಿಗಿಂತ ವಿದೇಶಿ ವ್ಯಾಪಾರಗಾರರಿಗೆ ಆಹಾರ ಧಾನ್ಯಗಳು ಕಡಿಮೆ ಬೆಲೆಗೆ ದೊರೆಯುವಂತೆ ಆಗಿದೆ. ಇತ್ತೀಚಿನ ವರದಿಯಂತೆ 3200 ಕೋಟಿ ಆಹಾರಧಾನ್ಯವು (5.2 ಮಿಲಿಯನ್ ಟನ್) ಕಳುವಾಗಿದೆ. ಇಂತಹ ಸಂದರ್ಭದಲ್ಲಿ ಹೊಸ ಆಹಾರ ನೀತಿಯನ್ನು ರೂಪಿಸಿ ಅದಕ್ಕಾಗಿ ಹೋರಾಡುವುದು ಸಮಾವೇಶದ ಮುಖ್ಯ ಉದ್ದೇಶವಾಗಿತ್ತು.

## ಬಡವರು ಯಾರು?

ಬಡತನದ ರೇಖೆಯ ಕೆಳಗಿರುವವರನ್ನು ಗುರುತಿಸುವುದೇ ಹೊಸ ಆಹಾರ ನೀತಿಯ ಮುಖ್ಯ ಉದ್ದೇಶವಾಗಬೇಕು. ವಾಜಪೇಯಿ ತಮ್ಮ 'ಹುಟ್ಟುಹಬ್ಬ'ದ ಉಡುಗೊರೆಯೆಂದು ಬಡವರಿಗೆ ಕೊಟ್ಟ 'ಅಂತ್ಯೋದಯ' ಯೋಜನೆಯಡಿ ಬಡವರಲ್ಲಿ ಅತಿ ಬಡವರು, ಸ್ವಲ್ಪ ಬಡವರು ಎಂಬ ವರ್ಗೀಕರಣವೇ ಅಮಾನವೀಯವಾಗಿದೆ. ವಿಶ್ವಬಾಂಕ್‌ನ ಆದೇಶದಂತೆ ನಮ್ಮ ದೇಶದ ಬಡವರ ವರ್ಗೀಕರಣ ನಡೆಯುತ್ತಿದೆ.

## ಹೆಚ್ಚಿದ ಬೆಲೆ, ಕಡಿಮೆ ಕಂತು

1996ರಲ್ಲಿದ್ದ ಕೇಂದ್ರ ಸಂಮಿಶ್ರ ಸರ್ಕಾರವು ಪಡಿತರ ಆಹಾರ ಬೆಲೆಯನ್ನು ನಿಗಧಿ ಮಾಡುವಾಗ ಮಾರುಕಟ್ಟೆ ಬೆಲೆಯ ಎರಡನೇ ಮೂರರಷ್ಟು ಬೆಲೆಯನ್ನು ನಿಗಧಿ ಮಾಡಿತು. ಅಂದರೆ ಗೋಧಿಗೆ ರೂ. 2.50 ಮತ್ತು ಅಕ್ಕಿಗೆ ರೂ. 3.50 ಒಟ್ಟು ಧಾನ್ಯದ 80%ನ್ನು ಬಡವರಿಗೆ ಹಂಚಲಾಗುತ್ತಿತ್ತು. ನಂತರದ ದಿನಗಳಲ್ಲಿ ಆಹಾರಧಾನ್ಯದ ಬೆಲೆ ಹೆಚ್ಚಾಗುತ್ತಾ ಬಂದು 2002 ಮತ್ತು 2003ನೇ ವರ್ಷದಲ್ಲಿ ಒಟ್ಟು ಧಾನ್ಯದ ಕೇವಲ ಶೇಕಡ 20ರಷ್ಟು ಮಾತ್ರ ಬಡವರಿಗೆ ಪಡಿತರಲ್ಲಿ ದೊರಕುವಂತಾಗಿದೆ.

## ಬಡತನದ ವ್ಯಾಖ್ಯಾನ

ಸರ್ಕಾರವು ನಿಗಧಿಪಡಿಸುವ ಬಡತನದ ಕೆಳಗಿನ ರೇಖೆಯ ಪರಿಕಲ್ಪನೆಯೇ ಹಾಸ್ಯಾಸ್ಪದವಾಗಿದೆ. ಸರ್ಕಾರವೇ ಪ್ರಕಟಿಸಿರುವ ನಿರುದ್ಯೋಗದ ಅಂಕಿ ಅಂಶಗಳನ್ನು ನೋಡಿದರೆ ಹೆಚ್ಚು ಜನಗಳಿಗೆ ಕಡಿಮೆ ಕೆಲಸವಿದೆ. ಗ್ರಾಮಾಂತರದಲ್ಲಿ ಪ್ರತಿ ಹತ್ತು ಕುಟುಂಬಗಳಲ್ಲಿ 9 ಕುಟುಂಬಗಳು ಮತ್ತು ನಗರ ಪ್ರದೇಶದಲ್ಲಿ 7 ಕುಟುಂಬಗಳು ತಾವು ಸಂಪಾದಿಸುವ 100 ರೂಗಳಲ್ಲಿ 60ರೂಗಳನ್ನು ಆಹಾರಕ್ಕಾಗಿ ಖರ್ಚುಮಾಡುತ್ತವೆ. ರಾಷ್ಟ್ರೀಯ ಆರೋಗ್ಯ ಸಂಶೋಧನೆ ಪ್ರಕಟಪಡಿಸಿರುವಂತೆ ಭಾರತದ ಅರ್ಧ ಜನಸಂಖ್ಯೆಗೆ ಸಾಕಷ್ಟು ಆಹಾರ ದೊರೆಯುತ್ತಿಲ್ಲ ಮತ್ತು ಅಪೌಷ್ಟಿಕತೆಯಿಂದ ನರಳುತ್ತಿರುತ್ತಾರೆ ಹಾಗೂ ಶೇಕಡ 80ರಷ್ಟು ಮಹಿಳೆಯರು ರಕ್ತ ಹೀನತೆಯಿಂದ ನರಳುತ್ತಿರುತ್ತಾರೆ. ಕಳೆದ ಕೆಲವು ವರ್ಷಗಳಲ್ಲಿ ದೇಶವೇ ಬರದಿಂದ ಕಂಗೆಟ್ಟಿದೆ. ಕೃಷಿಯಿಂದಲೇ ಬದುಕುತ್ತಿರುವ ಕೋಟ್ಯಾಂತರ ಬಡಜನರು ಇದರಿಂದ ಕಂಗೆಟ್ಟಿದ್ದಾರೆ.

ಇಷ್ಟೆಲ್ಲ ವಾಸ್ತವದ ನಡುವೆಯೂ ಸರ್ಕಾರವು ಬಡತನ ಕಡಿಮೆಯಾಗುತ್ತಿದೆ, ಎಂದು ಘೋಷಿಸುತ್ತಿದೆ. ಕಳೆದ ಜನಗಣತಿಯಲ್ಲಿ 1993-1994ರಲ್ಲಿ 100ಕ್ಕೆ 36ರಷ್ಟು ಬಡವರು ಇದ್ದರೆ 1999-2000ರ ಜನಗಣತಿಯಲ್ಲಿ ಈ ಸಂಖ್ಯೆ 26ಕ್ಕೆ ಕುಸಿದಿದೆ ಎಂದು ಸರ್ಕಾರ ಹೆಮ್ಮೆ ಪಡುತ್ತಿದೆ. ಅಂದರೆ ಈ ಮಾಂತ್ರಿಕ ಶಕ್ತಿಗೆ ಕಾರಣವೇನು?

ಬಡತನದ ವ್ಯಾಖ್ಯಾನವನ್ನು ಕಿರಿದುಗೊಳಿಸಿ ಅಂಕಿ ಸಂಖ್ಯೆಗಳನ್ನು ಬದಲಾಯಿಸಿಬಿಟ್ಟರೆ ದೇಶದಲ್ಲಿ ಬಡತನ ತೊಲಗಿದಂತೆ ಎಂದು ಹೇಳಬಹುದು. ಆದರೆ ಇದರಿಂದ ವಸ್ತುಸ್ಥಿತಿ

ಬದಲಾಗುತ್ತಿದೆಯೇ? ಪೌಷ್ಠಿಕ ಆಹಾರದ ಕೊರತೆಯಿಂದಾಗಿ ಗುಲಬರ್ಗಾ ಚಿಂಚೋಳಿ ತಾಲ್ಲೂಕಿನಲ್ಲಿ ಸುಮಾರು 15 ಮಕ್ಕಳು ಸಾವಿಗೀಡಾದ ವರದಿ ಬಂದಿದೆ. ರಾಯಚೂರಿನಲ್ಲಿ ಬಿಸಿಲಿನ ಬೇಗೆಗೆ ಇಬ್ಬರು ಮಹಿಳೆಯರು ಸಾವನ್ನಪ್ಪಿರುವ ಖಚಿತ ವರದಿ ಇದೆ. ಇದು ಮೇಲ್ನೋಟಕ್ಕೆ ಬಿಸಿಲಿನ ಬೇಗೆಯೆನಿಸಿದರೂ ಈ ಸಾವಿಗೆ ಮುಖ್ಯ ಕಾರಣ ಪೌಷ್ಠಿಕ ಆಹಾರದ ಕೊರತೆ.

ದೆಹಲಿಯಲ್ಲಿ ನಡೆದ ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆಯ ಸಮಾವೇಶವು ಈ ಎಲ್ಲ ಅಂಶಗಳನ್ನು ದೃಷ್ಟಿಯಲ್ಲಿಟ್ಟು ಕೆಲವೊಂದುನಿರ್ಣಯಗಳನ್ನು ಮಂಡಿಸಿತು. ಬಡತನ ಮತ್ತು ಮಹಿಳೆಗೆ ಸಂಬಂಧಪಟ್ಟ ಕೆಲವು ವಸ್ತುಸ್ಥಿತಿಗಳನ್ನು ತೆರೆದಿಟ್ಟಿತು.

ಪ್ರಸ್ತುತ ಸರ್ಕಾರದ ಆಹಾರ ನೀತಿಯಿಂದಾಗಿ ಹೆಣ್ಣುಮಕ್ಕಳು ಮತ್ತು ಹೆಂಗಸರು ಅತೀವ ಕಷ್ಟಕ್ಕೆ ಒಳಗಾಗಿದ್ದಾರೆ. ಕೆಲಸವಿಲ್ಲದಿರುವುದು ಮತ್ತು ಆಹಾರ ಸಿಗದಿರುವುದು ಹೆಂಗಸಿನ ದೈಹಿಕ ಆರೋಗ್ಯಕ್ಕೆ ಹಾನಿಕಾರಕವಷ್ಟೇ ಅಲ್ಲ, ಅವರ ಸಮಾಜಿಕ ಸ್ಥಾನಮಾನಕ್ಕೂ ಧಕ್ಕೆಯುಂಟುಮಾಡುತ್ತದೆ. ಅವಳ ಅಸಹಾಯಕತೆಯಿಂದಾಗಿ ಹಣವಂತರ ಮತ್ತು ಕಂಟ್ರಾಕ್ಟ್‌ದಾರರ ದೌರ್ಜನ್ಯಕ್ಕೆ ಒಳಗಾಗುತ್ತಾಳೆ. ಈ ಎಲ್ಲ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸಮಾವೇಶವು ಈ ಕೆಲವು ಬೇಡಿಕೆಗಳನ್ನು ಮಂಡಿಸಿದೆ.

1. ಸಾರ್ವಜನಿಕ ಆಹಾರ ವಿತರಣಾ ವ್ಯವಸ್ಥೆಯನ್ನು ಹೆಚ್ಚು ಬಲಪಡಿಸಬೇಕು.

2. ಮಧ್ಯಂತರ ಪರಿಹಾರವಾಗಿ ಬಡತನದ ರೇಖೆಯ ಕೆಳಗಿರುವ ಎಲ್ಲರಿಗೂ ಅಕ್ಕಿಯನ್ನು ಒಂದು ಕೇಜಿಗೆ 3 ರೂ.ನಂತೆ ಮತ್ತು ಗೋಧಿಯನ್ನು ಕೆ.ಜಿ.ಗೆ 2 ರೂ.ನಂತೆ ವಿತರಣೆ ಮಾಡಬೇಕು.

3. ಪಡಿತರ ವಿಸ್ತರಣೆಯನ್ನು ಮಾಡುವಾಗ ಸದಸ್ಯರನ್ನು ದೃಷ್ಟಿಯಲ್ಲಿಟ್ಟುಕೊಳ್ಳಬೇಕೇ ಹೊರತು ಕುಟುಂಬವನ್ನು ದೃಷ್ಟಿಯಲ್ಲಿಟ್ಟುಕೊಳ್ಳುವುದಲ್ಲ.

4. ದುಡಿಮೆ ಮೂಲಭೂತ ಹಕ್ಕೆಂದು ಸರ್ಕಾರವು ನಿರ್ಧರಿಸಿ ಉದ್ಯೋಗವನ್ನು ಹೆಚ್ಚುಗೊಳಿಸಲು ವಿಸ್ತೃತ ಯೋಜನೆಯನ್ನು ಕೈಗೊಳ್ಳಬೇಕು.

5. ಈಗ ಚಾಲ್ತಿಯಲ್ಲಿರುವ 'ಅಂತ್ಯೋದಯ' ಯೋಜನೆಯ ನಿಗಧಿ ಪಡಿಸುವ ದರದಲ್ಲಿಯೇ ಆಹಾರಧಾನ್ಯದ ಬೆಲೆಯನ್ನು ನಿರ್ಧರಿಸಬೇಕು.

6. ಬಡತನ ವ್ಯಾಖ್ಯಾನ ಮತ್ತು ಮಾನದಂಡವನ್ನು ನಿರ್ಧರಿಸಲು ಒಂದು ತಾರ್ಕಿಕವಾದ ಮತ್ತು ರಚನಾತ್ಮಕವಾದ ವಿಶ್ಲೇಷಣೆಯನ್ನು ಮಾಡಿ ಎಲ್ಲರಿಗೂ ಸಾಮಾಜಿಕ ನ್ಯಾಯ ದೊರಕಿಸಲು ಪ್ರಯತ್ನಿಸಬೇಕು. ★

## ಬೇಲಿಯೇ ಎದ್ದು ಹೊಲ ಮೇಯ್ದರೆ?

ಉತ್ತರ ಪ್ರದೇಶದ ಗಜಿಯಾ ಜಿಲ್ಲೆಯ ಸಿವಿಲ್ ನ್ಯಾಯಾಧೀಶ ಆರ್. ಪಿ. ಮಿಶ್ರ ಭ್ರಷ್ಟಾಚಾರದ ಆರೋಪದ ಮೇಲೆ ಸಸ್ಪೆಂಡ್ ಆದದ್ದು ಇತ್ತೀಚೆಗಷ್ಟೆ ಸುದ್ದಿಯಲ್ಲಿತ್ತು. ಭ್ರಷ್ಟಾಚಾರಕ್ಕೆ ಜಾತಿಬೇಧ, ಲಿಂಗ ಬೇಧ ಹಾಗೂ ವೃತ್ತಿಬೇಧವಿಲ್ಲವೆಂಬುದು ಸಾರ್ವತ್ರಿಕ ಸತ್ಯವೆಂಬ ವಿಷಯ ಎಲ್ಲರಿಗೂ ತಿಳಿದದ್ದೆ. ಆದರೆ ಈ ಅಪರಾಧಗಳ ಜೊತೆಯಲ್ಲಿ ನ್ಯಾಯಾಧೀಶರು ಮತ್ತು ಲೈಂಗಿಕಹಗರಣಗಳು ಜಂಟಿಯಾಗಿ ಪ್ರಕಟವಾಗುತ್ತಿರುವುದು ಮತ್ತು ಇಂತಹ ಪ್ರಕರಣಗಳು ಹೆಚ್ಚುತ್ತಿರುವುದು ನಿಜವಾಗಿಯೂ ಆತಂಕಕಾರಿ ಸುದ್ದಿ. ಇವುಗಳಲ್ಲಿ ಇತ್ತೀಚಿನ ಸಿವಿಲ್ ನ್ಯಾಯಾಧೀಶ ಆರ್. ಪಿ. ಮಿಶ್ರರವರ ಸಮಾಜದ್ರೋಹಿ ಚಟುವಟಿಕೆಗಳು ಸಾಮಾಜಿಕ ಸ್ವಾಸ್ಥ್ಯಕ್ಕೆ ಬರೆ ಎಳೆದಂತೆ.

ಭ್ರಷ್ಟಾಚಾರದ ಆರೋಪದ ಮೇಲೆ ಸಸ್ಪೆಂಡ್ ಆದ ಸಿವಿಲ್ ನ್ಯಾಯಾಧೀಶ ಈ ಆರ್.ಪಿ. ಮಿಶ್ರ ಈಗ ಸೂಳೆಗಾರಿಕೆಯ ದಂಧೆ ನಡೆಸುತ್ತಿರುವ ಆರೋಪದ ಮೇಲೆ ಬಂಧನಕ್ಕೊಳಗಾಗಿರುವುದು ಮತ್ತೂ ನಾಚಿಕೆಗೇಡಿನ ವಿಷಯ. ಕಾಲ್‌ಗರ್ಲ್‌ಗಳ ದೊಡ್ಡ ರಾಕೆಟ್‌ಗೆ ಸೂತ್ರಧಾರಿಯಾಗಿದ್ದ ಆರ್.ಪಿ. ಮಿಶ್ರರವರ ಸಂಚು ಬಯಲಾದದ್ದು ಇತ್ತೀಚೆಗೆ ವಿನಯಖಾಂಡದ ಮನೆಯೊಂದರಲ್ಲಿ ಸೆರೆಯಾಗಿದ್ದ ಫರಾಸಿದ್ದಿಕಿ ಎಂಬ ಹುಡುಗಿಯ ಘಟನೆಯಿಂದ. ಕೆಲಸ ಕೊಡಿಸುವ ಆಸೆಯಿಂದ ಮನೆಗೆ ಕರೆತಂದ ಈ ಹುಡುಗಿಯನ್ನು ಮೈಮಾರುವ ಕೆಲಸಕ್ಕೆ ಒತ್ತಾಯಿಸುತ್ತಿದ್ದಾಗ ನಿರಾಕರಿಸಿದ ಆ ಹುಡುಗಿಯನ್ನು ಸ್ನೇಹಿತನ ಮನೆಯಲ್ಲಿ ಕೂಡಿಹಾಕಲಾಗಿತ್ತು. ಅನಾಮಧೇಯ ಫೋನ್ ಕರೆಯಿಂದ ವಿಷಯ ತಿಳಿದ ಪೋಲೀಸರು ಸ್ಥಳಕ್ಕೆ ಧಾವಿಸಿ ಆ ಹುಡುಗಿಯನ್ನು ಪಾರುಮಾಡಿದ್ದಲ್ಲದೆ ಅವಳು ಕೊಟ್ಟ ಮಾಹಿತಿಯಿಂದ ನ್ಯಾಯಾಧೀಶರ ಹೆಣ್ಣು ಮಾರಾಟದ ವ್ಯವಹಾರಗಳೆಲ್ಲಾ ಬಯಲಾಗಿದೆ. ನ್ಯಾಯಾಧೀಶರ ಮನೆಯಲ್ಲಿ ದೊರೆತ ಡೈರಿಯಲ್ಲಿ ಹಲವಾರು ಕಾಲ್‌ಗರ್ಲ್‌ಗಳ ವಿಳಾಸದ ವಿವರಗಳು ಪೋಲಿಸರಿಗೆ ದೊರೆತಿವೆ.

ಸಮಾಜದ ಭ್ರಷ್ಟರಿಗೆ, ಖದೀಮರಿಗೆ ಶಿಕ್ಷೆ ವಿಧಿಸಿ ಸಾಮಾಜಿಕ ಸ್ವಾಸ್ಥ್ಯ ಕಾಪಾಡಬೇಕಾದ ನ್ಯಾಯಾಂಗದ ಇಂತಹ ವರಿಷ್ಠರೇ ಅಪರಾಧಿಗಳ ಪಟ್ಟಿಗೆ ಸೇರಿಬಿಟ್ಟರೆ ಸಾಮಾಜಿಕ ಭದ್ರತೆ ಎಲ್ಲಿರುತ್ತದೆ?

# ಆತಂಕಕಾರಿ ಸ್ತ್ರೀವಿರೋಧಿ ಬೆಳವಣಿಗೆ

ಸಹಿಯಾ ಸ್ತ್ರೀ ಸಂಘಟನೆ, ಬರೋಡಾದಲ್ಲಿರುವ ಕಾನೂನು ಮತ್ತು ಕುಟುಂಬ ಸಲಹಾ ಕೇಂದ್ರವಾಗಿ ಕೆಲಸ ಮಾಡುತ್ತಿದೆ. ಈ ಸಂಘಟನೆ ಮುಖ್ಯವಾಗಿ ಲಿಂಗಪರೀಕ್ಷೆಯ ವಿರುದ್ಧದ ಪ್ರಚಾರ ಚಳುವಳಿಯಲ್ಲಿ ತೊಡಗಿದೆ. ಈ ಸಂದರ್ಭದಲ್ಲಿ ಸಮಾಜದ ವಿವಿಧ ನೆಲೆಗಳ ಜನರ ಅಭಿಪ್ರಾಯವನ್ನು ಕುರಿತು ಕ್ಷೇತ್ರಕಾರ್ಯ ನಡೆಸಿದೆ. ಗುಜರಾತಿನಲ್ಲಿ ಹೆಂಗಸರ ಲಿಂಗ ಪ್ರಮಾಣ ಗಮನಾರ್ಹವಾಗಿ ಇಳಿಮುಖವಾಗುತ್ತಿರುವುದನ್ನು ಆತಂಕದಿಂದ ಈ ಅಧ್ಯಯನ ಗಮನಿಸಿದೆ. ಈ ಸಂಬಂಧವಾಗಿ ಸಹಿಯಾ ಸ್ತ್ರೀಸಂಘಟನೆಯ ಸದಸ್ಯೆಯೂ ಅರ್ಥಶಾಸ್ತ್ರ ಪ್ರಾಧ್ಯಾಪಕಿಯೂ ಆಗಿರುವ ಶ್ರೀಮತಿ ತೃಪ್ತಿ ಷಾರವರೊಡನೆ ನಡೆಸಿದ ಸಂದರ್ಶನವಿದು.

ಪ್ರ : ಔದ್ಯೋಗಿಕರಣ ಮತ್ತು ಹೆಚ್ಚಿನ ನಗರೀಕರಣದಿಂದಾಗಿ ಭಾರತದ ರಾಜ್ಯಗಳಲ್ಲೆಲ್ಲಾ ಗುಜರಾತ್ ಅತ್ಯಂತ ಅಭಿವೃದ್ಧಿಶಿಲವೆನಿಸಿಕೊಂಡಿದೆ. ಇಂತಹ ರಾಜ್ಯದಲ್ಲಿ ಈ 'ಸ್ತ್ರೀ ವಿರೋಧಿ' ಚಟುವಟಿಕೆ ಹೇಗೆ ನಡೆದಿದೆ?

ತೃ : ಕಳೆದೆರಡು ದಶಕಗಳಲ್ಲಿ ಗುಜರಾತ್‌ನ ನಗರೀಕರಣ ಶೇಕಡ 37ರಷ್ಟು ಹೆಚ್ಚಿದೆ. ರಾಷ್ಟ್ರೀಯ ನಗರೀಕರಣದ ಸಂಖ್ಯೆ ಶೇಕಡ 27. ಹಾಗೆಯೇ ರಾಜ್ಯದ ಸಾಕ್ಷರತಾ ಪ್ರಮಾಣವು 69.98 ಮತ್ತು ಮಹಿಳಾ ಸಾಕ್ಷರತಾ ಪ್ರಮಾಣ ಶೇಕಡ 58.60 ಆದರೆ ಈ ಅವಧಿಯಲ್ಲಿ ಸ್ತ್ರೀ-ಪುರುಷ ಪ್ರಮಾಣ ಸಂಖ್ಯೆಯು ಇಳಿಮುಖವಾಗುತ್ತಾ ಹೊರಟಿದೆ. 1981ರಲ್ಲಿ 947 ಇದ್ದದ್ದು 1991ರಲ್ಲಿ 928 ಮತ್ತು 2001ರಲ್ಲಿ 878ರಷ್ಟಾಗಿದೆ. ಅಭಿವೃದ್ಧಿ ಹೊಂದಿದ ಜಿಲ್ಲಾ ಕೇಂದ್ರಗಳಲ್ಲಿ ಈ ಲಿಂಗ ಪ್ರಮಾಣದ ಸಂಖ್ಯೆ ಗಾಬರಿ ಹುಟ್ಟಿಸುವಂತಿದೆ. ಅಹಮದಾಬಾದ್ (813:1000), ಮೆಹಸಾನ (797:1000), ಗಾಂಧಿನಗರ (816:1000) ರಾಜಕೋಟ (843:1000), ವಿಪರ್ಯಾಸವೆಂದರೆ ಈ ಜಿಲ್ಲೆಗಳಲ್ಲಿ ಮಹಿಳಾ ಸಾಕ್ಷರತಾ ಪ್ರಮಾಣವು ರಾಜ್ಯದ ಸರಾಸರಿ ಪ್ರಮಾಣಕ್ಕಿಂತ ಹೆಚ್ಚಿದೆ. ಉದಾರಹಣೆಗೆ ಅಹಮದಾಬಾದ್ (64) ಮೆಹಸಾನ (65) ಗಾಂಧಿನಗರ (816) ರಾಜಕೋಟ (843) ಆದರೆ ಇದಕ್ಕೆ ವಿರುದ್ಧವಾಗಿ ಡಾಂಗ್ಸ್, ದಾಹೂದ್ ಮತ್ತು ನರ್ಮದಾ ಪ್ರಾಂತ್ಯದ ಬುಡಕಟ್ಟು ಜನಾಂಗಗಳಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ 49,32,47 ಇದ್ದರೆ ಲಿಂಗ ಪ್ರಮಾಣದ ಸಂಖ್ಯೆ 973,964 ಮತ್ತು 952 ಇದೆ. ಆದ್ದರಿಂದ ವಿದ್ಯಾವಂತ ಮತ್ತು ನಗರಪ್ರದೇಶಗಳ ಜನರೇ ಹೆಚ್ಚು ಅಪರಾಧಿಗಳು ಎನ್ನುವುದು ನಮ್ಮ ಅಭಿಪ್ರಾಯ.

ಪ್ರ : ಹಾಗಾದರೆ ಈ ಎರಡು ದಶಕಗಳಲ್ಲಿ ಉಂಟಾಗಿರುವ ಬದಲಾವಣೆಯೇನು?

ತೃ : ದಕ್ಷಿಣದಲ್ಲಿರುವಂತೆ ಮೊದಲಿನಿಂದಲೂ ಅಂದರೆ 20ನೇ ಶತಮಾನದ ಪ್ರಾರಂಭದಿಂದಲೂ ಸ್ತ್ರೀ-ಪುರುಷ ಪ್ರಮಾಣ ಗುಜರಾತಿನಲ್ಲಿ ಸಮಾಧಾನಕರವಾಗೇನೂ ಇಲ್ಲ. 'ಧೂದ್ ಪೀತಿ'ಯಂತಹ ಹೆಣ್ಣು ಶಿಶುಹತ್ಯೆಯ ಪದ್ಧತಿ ಇಲ್ಲಿ ವ್ಯಾಪಕವಾಗಿ ಜಾರಿಯಲ್ಲಿತ್ತು. ಹುಟ್ಟಿದ ಹೆಣ್ಣು ಮಗುವನ್ನು ಹಾಲಿನ ಮಡಕೆಯಲ್ಲಿ ಮುಳುಗಿಸುವ ಸಂಪ್ರದಾಯವಿದು. ನಮ್ಮ ಅಧ್ಯಯನದಿಂದ ತಿಳಿದು ಬಂದಿರುವ ಸಂಗತಿಯೆಂದರೆ ನಮ್ಮ ಸಮಾಜದಲ್ಲಿ ಚಾರಿತ್ರಿಕವಾದ ಪಿತೃಪ್ರಧಾನ ಮೌಲ್ಯಗಳು ಆಧುನಿಕ ಬಂಡವಾಳಶಾಹಿ ಮೌಲ್ಯಗಳೊಂದಿಗೆ ಸೇರಿಕೊಂಡು ಮಹಿಳೆಯರಿಗೆ ಕಂಟಕವಾಗಿ ಪರಿಣಮಿಸಿವೆ.

ಮುಂಚೆ ಸಾಮಾಜಿಕ ಉತ್ಪಾದನೆಯಲ್ಲಿ ಭಾಗವಹಿಸದ ಹೆಂಗಸರ ಸಂಖ್ಯೆ ಬಹಳ ಕಡಿಮೆಯಿತ್ತು. ಆದರೆ ಇಂದು ಹೆಚ್ಚು ಹೆಚ್ಚು ಹೆಂಗಸರು ಈ ಗುಂಪಿಗೆ ಸೇರುತ್ತಿದ್ದಾರೆ. ಅದರಲ್ಲೂ ನಗರ ಪ್ರದೇಶದ ಹೆಂಗಸರು ಹೆಚ್ಚು ಹೆಚ್ಚು ಮನೆಯೊಳಗೆ ಉಳಿಯುತ್ತಾರೆ. ಕೆಳಜಾತಿಯ ಜನ ಮೇಲ್ಜಾತಿಯ ಜನರ ಆಚಾರ-ವಿಚಾರಗಳನ್ನು ಅಳವಡಿಸಿಕೊಂಡು ಸಾಮಾಜಿಕ ಸ್ಥಾನಮಾನ ಪಡೆಯುವ ಸನ್ನಾಹ ನಡೆಸುವ ಪ್ರವೃತ್ತಿ ಒಂದು ಕಡೆಯಾದರೆ, 'ಕೊಳ್ಳುಬಾಕ' ಸಂಸ್ಕೃತಿಯಾಗಿ ಹುಟ್ಟಿಕೊಂಡ ವರದಕ್ಷಿಣೆಯಂತಹ ಸಾಮಾಜಿಕ ಅನಿಷ್ಟಗಳು ಇದುವರೆಗೆ ಆಚರಿಸಲ್ಪಡದ ಜಾತಿಗಳಿಗೂ ವ್ಯಾಪಿಸಿದೆ. ನಮ್ಮ ಅಧ್ಯಯನಗಳು ಪ್ರಕಟಪಡಿಸುವ ಬಹುಮುಖ್ಯ ಅಂಶವೆಂದರೆ ಆರ್ಥಿಕ ಅಭದ್ರತೆ ಮತ್ತು ಅಸಂದಿಗ್ಧತೆಗಳು 'ಪುತ್ರನ ಆದ್ಯತೆ'ಯನ್ನು ಕೆಳಜಾತಿ, ಕೆಳವರ್ಗದ ಕುಟುಂಬಗಳಲ್ಲಿ ಹೆಚ್ಚಿಸಿವೆ. ಮೇಲ್ಜಾತಿಯ ಮತ್ತು ಅನುಕೂಲಸ್ಥ ಕುಟುಂಬಗಳಲ್ಲೂ 'ಸಣ್ಣ ಕುಟುಂಬಕ್ಕೆ' ಆದ್ಯತೆಯಿರುವುದರಿಂದ ಇದೇ ಪ್ರವೃತ್ತಿ ಬೆಳೆಯುತ್ತಿದೆ. ಇದಕ್ಕೆಲ್ಲಾ ಕಳಶವಿಟ್ಟಂತೆ ಲಿಂಗ ಪರೀಕ್ಷೆಯ ತಾಂತ್ರಿಕತೆಯು ಸುಧಾರಣೆಯಾದಂತೆಲ್ಲಾ ಸಮಸ್ಯೆ ಇನ್ನೂ ಹೆಚ್ಚು ಕ್ಲಿಷ್ಟವಾಗುತ್ತಿದೆ.

ಪ್ರ : ಶ್ರೀಮಂತಿಕೆ ಮತ್ತು ಹೆಂಗಸರ ಮೇಲಿನ ದೌರ್ಜನ್ಯ - ಇವೆರಡಕ್ಕೂ ಸಂಬಂಧವಿದೆಯೇ?

ತೃ : ಶ್ರೀಮಂತಿಕೆ ಹೆಚ್ಚಿದಂತೆಲ್ಲಾ ಹೆಂಗಸರ ಮೇಲಿನ ದೌರ್ಜನ್ಯ ಆಳವಾಗುತ್ತಿದೆ. ಇಂದು ವೈದ್ಯರು ಲಿಂಗಪರೀಕ್ಷೆಯ ಮೂಲಕ ಹಣವನ್ನು ದೋಚುತ್ತಿದ್ದಾರೆ. ಮತ್ತೆ ಕೆಲವರು ಅದು ಕುಟುಂಬ ಯೋಜನೆ ಸಹಕಾರಿಯೆಂದು, ಸಮಾಜಸೇವೆಯೆಂದು ಭಾವಿಸಿದಂತಿದೆ. ಲಿಂಗ ಪರೀಕ್ಷೆಯ ನಂತರ ಭ್ರೂಣವನ್ನು ನಿವಾರಿಸುವುದು ಹುಟ್ಟದಿರುವ

CPMG/KA/BG-8/2003-05 RNI No. 45577/88

*Posted at Basavanagudi P.O. On the 25th of every Month*

ಶಿಶುವಿನ ಮೇಲೆ ನಡೆಸುವ ದೌರ್ಜನ್ಯ ಮಾತ್ರವಲ್ಲ, ಆ ಮಗುವಿನ ತಾಯಿಯ ಮೇಲೆ ನಡೆಸುವ ದೌರ್ಜನ್ಯವೂ ಆಗುತ್ತದೆ. ಹೆಣ್ಣಿನ ಸಂಖ್ಯೆ ಕಡಿಮೆ ಇರುವ ಸಮಾಜದಲ್ಲಂತೂ ಅದು ಹಲವಾರು ಸಮಸ್ಯೆಗಳಿಗೆ ದಾರಿಮಾಡುತ್ತದೆ. ಅದರಿಂದ ಸಾಮಾಜಿಕ ಮತ್ತು ಕೌಟುಂಬಿಕ ದೌರ್ಜನ್ಯಗಳು ಹೆಚ್ಚುತ್ತವೆ. ಒಟ್ಟಾರೆಯಾಗಿ ಇದು ಹೆಣ್ಣನ್ನು ಕುರಿತ ಕೀಳುಭಾವನೆಯನ್ನು ಪ್ರಕಟಪಡಿಸುತ್ತದೆ.

ಪ್ರ : ಕೋಮು ಸಂಘರ್ಷದ ಸಂದರ್ಭದಲ್ಲಿ ಮಹಿಳೆಯರ ಮೇಲಿನ ದೌರ್ಜನ್ಯವನ್ನು ನೀವು ಹೇಗೆ ವ್ಯಾಖ್ಯಾನಿಸುತ್ತೀರಿ?

ತೃ : ಕೋಮು ಗಲಭೆಗಳ ಸಂದರ್ಭದಲ್ಲಿ ಹೆಂಗಸರನ್ನು ಜಾತಿ, ಸಮುದಾಯಗಳ ಘನತೆಯ ಸೂಚಕವಾಗಿ ಭಾವಿಸಲಾಗುತ್ತದೆ. ಕಳೆದ ವರ್ಷದ ಕೋಮುಗಲಭೆಯಲ್ಲಿ ಮುಸ್ಲಿಂ ಮಹಿಳೆಯರ ಮೇಲೆ ನಡೆಸಿದ ದೌರ್ಜನ್ಯದ ಅರ್ಥ ಇದೇ. ಹೆಣ್ಣು ಮಕ್ಕಳನ್ನು ಕುಟುಂಬ ಮತ್ತು ಸಮಾಜವು ಒಂದು ದೊಡ್ಡ ಹೊರೆಯೆಂದೇ ಭಾವಿಸುತ್ತದೆ. ಆದ್ದರಿಂದಲೇ ಕೋಮುಗಲಭೆಯ ನಂತರದ ನಿರಾಶ್ರಿತ ಶಿಬಿರದಲ್ಲಿ ಅತ್ಯಂತ ಎಳೆಯ ವಯಸ್ಸಿನ ಹೆಣ್ಣು ಮಕ್ಕಳಿಗೆ ಸಾಮೂಹಿಕ ವಿವಾಹಗಳನ್ನು ನಡೆಸಿದ್ದನ್ನು ನಾವು ನೋಡಿದ್ದೇವೆ.

ಪ್ರ : ಆದರೆ ಕಳೆದೆರಡು ದಶಕಗಳಲ್ಲಿ ಸ್ತ್ರೀಪರವಾದ ರಾಜಕೀಯ ಮತ್ತು ಕಾನೂನಿಕ ಪ್ರಯತ್ನಗಳು ನಡೆದಿವೆಯೆಂದು ಅನಿಸುವುದಿಲ್ಲವೇ?

ತೃ : ಹೆಣ್ಣಿನ ಸಮಸ್ಯೆಗಳನ್ನು ಕೈಗೆತ್ತಿಕೊಳ್ಳುವ ರಾಜಕೀಯ ಪಕ್ಷಗಳು ಕೆಲವೊಮ್ಮೆ ಅದನ್ನು ಶಾಸ್ತ್ರಕ್ಕಾಗಿ ಮಾಡುತ್ತವೆಯೇ ಹೊರತು ನಿಜವಾದ ಅರ್ಥದಲ್ಲಿ ಆ ಸಮಸ್ಯೆಗಳ ಲಿಂಗಭೇದದ ಸ್ವರೂಪ ಮತ್ತು ದೌರ್ಜನ್ಯದ ಸ್ವರೂಪವನ್ನು ನಿರ್ಮೂಲನ ಮಾಡುವ ಉದ್ದೇಶ ಹೊಂದಿರುವುದಿಲ್ಲ. ಭಾರತ ಸರ್ಕಾರವು ಪ್ರಕಟಪಡಿಸಿದ ಮಹಿಳಾ ಸಶಸ್ತೀಕರಣದ ಯೋಜನೆಯಾಗಲಿ, ಗುಜರಾತ್ ಸರ್ಕಾರವು ಪ್ರಕಟಪಡಿಸಿರುವ 'ಲಿಂಗ ಸಮಾನತೆ'ಯ ಕಾರ್ಯಕ್ರಮ ಕೂಡ ಇದೇ ರೀತಿಯದು. ಲಿಂಗ ಸಮಾನತೆಯ ವಿರುದ್ಧದ ಹೋರಾಟವೆಂದರೆ ಅದು ಎಲ್ಲರೀತಿಯ ಸಾಮಾಜಿಕ ಕ್ರೌರ್ಯ ಮತ್ತು ದೌರ್ಜನ್ಯದ ವಿರುದ್ಧದ ಹೋರಾಟವೂ ಆಗಿರಬೇಕು ಎಂಬುದನ್ನು ಮರೆಯುವಂತಿಲ್ಲ.

*(ಕೃಪೆ : ವಿಮೆನ್ಸ್ ಫೀಚರ್ ಸರ್ವೀಸ್)*

"Achala" 108, Skyline Surabhi,
14 - P , Vidyapeeta Road,
BSK III Stage,
Bangalore - 560 085

To : Smt/Sri